ಕನ್ನಡ ಶೈಕ್ಷಣಿಕ ಮಾಸ ಪತ್ರಿಕೆ

# ಸಾಮಾನ್ಯಜ್ಞಾನ

ನವೆಂಬರ್ ೧೯೮೫



ಜವಾಹರಲಾಲ್ ನೆಹರು

(ನವೆಂಬರ್ 14ರಂದು ನೆಹರು ಹುಟ್ಟಿದ ದಿನ.
ಅಂದು ಅವರ ನೆನಪಿಗಾಗಿ ಮಕ್ಕಳ ದಿನಾಚರಣೆ)

ಸಂಪಾದಕ: ಕೊಂಡಜ್ಜಿ ಕೆ. ವೆಂಕಟೇಶ್

## ಒಳ ಪುಟಗಳಲ್ಲಿ

# ಸಾಮಾನ್ಯಜ್ಞಾನ

ಕನ್ನಡ ಶೈಕ್ಷಣಿಕ ಮಾಸಪತ್ರಿಕೆ

ಸಂಪುಟ ೪   ಸಂಚಿಕೆ ೫   ನವೆಂಬರ್ ೧೯೮೫   ಪುಟ ೩೨   ಬೆಲೆ ರೂ. ೧-೦೦

ಸಂಪಾದಕ
ಕೊಂಡಜ್ಜಿ ಕೆ. ವೆಂಕಟೇಶ್
ಎಂ.ಎ., ಬಿ.ಕಾಂ.

ಸಹ ಸಂಪಾದಕ
ಜಿ. ಮಣಿಪ್ರಕಾಶ್

ಮುದ್ರಕರು
ಕೊಂಡಜ್ಜಿ ಪ್ರಿಂಟರ್ಸ್
216, ಸುಬ್ರಮಣ್ಯನಗರ
ಬೆಂಗಳೂರು-560 021

## ಕನ್ನಡ ಮತ್ತು ಕನ್ನಡಿಗರು

ಕನ್ನಡ ನಮ್ಮ ಭಾಷೆ. ನಮ್ಮ ಅಂದರೆ ಕನ್ನಡಿಗರ ಭಾಷೆ. ಸುಮಾರು ಎರಡು ಸಾವಿರ ವರ್ಷಗಳಷ್ಟೇ ಹಳೆಯದಾದ ಈ ಭಾಷೆ ಎಲ್ಲ ವಿಧದಲ್ಲೂ ಸಂಪೂರ್ಣ ಭಾಷೆ. ಇಂಗ್ಲಿಷ್‌ಗಿಂತಲೂ ಸಾವಿರ ವರ್ಷದಷ್ಟು ಹಳೆಯ ಭಾಷೆ. ಇಂದು ಆಡಳಿತಕ್ಕೆ ಆಗಲೀ ವ್ಯವಹಾರಕ್ಕೆ ಆಗಲೀ ಸಾಧ್ಯವಿಲ್ಲವೆನ್ನುವ ಮೂರ್ಖರ ಮಾತನ್ನು ಬಹಿಷ್ಕರಿಸಿ, ನೀವು - ನಾವು - ಎಲ್ಲರೂ ಇದಕ್ಕಾಗಿ ಹೋರಾಡಬೇಕಾಗಿದೆ.

ಕೇವಲ ಅಧಿಕಾರಕ್ಕಾಗಿ, ಸ್ವಾರ್ಥಕ್ಕಾಗಿ ನಾಟಕ ಮಾಡುವ, ಕಾರ್ಯರೂಪಕ್ಕೆ ತಾರದ, ಬರಿಯ ಆಶ್ವಾಸನೆಗಳ ಹೇಳಿಕೆಗಳಿಂದ-ವ್ಯಕ್ತಿಗಳಿಂದ ನಮ್ಮನ್ನು ಇಂದು ನಾವು ರಕ್ಷಿಸಿಕೊಳ್ಳಬೇಕಾಗಿದೆ. ಆಗ ಈ ತಿಂಗಳ ಮೊದಲ ದಿನ ನಾವು ಆಚರಿಸುವ "ಕನ್ನಡ ರಾಜ್ಯೋತ್ಸವ"ಕ್ಕೆ ಅರ್ಥ ಬಂದೀತು.

ಸಂಪಾದಕ

## ಮಾಸ ಚಿಂತನ

ಕನ್ನಡಿಗರೇ, ಏಳಿ, ಎಚ್ಚರಗೊಳ್ಳಿ, ಆರಂಭ ಮಾಡಿ; ಪೂರ್ವ ಚರಿತ್ರೆಯು, ವಿಶ್ವವಿದ್ಯಾನಿಲಯದ, ಸಾಹಿತ್ಯ ಪರಿಷತ್ತಿನ, ನೂತನ ಸಾಹಿತ್ಯಕಾರರ, ಉತ್ಸಾಹ ಪೂರಿತರಾಗಿ ಸೇವಾತುರರಾದ ಯುವಕ ದೇಶವತ್ಸಲರ ಶಕ್ತಿಯನ್ನು ಬಳಸಿ ಕನ್ನಡದ ಕೆಲಸ ಆರಂಭ ಮಾಡಿ.

– ಬಿ. ಎಂ. ಶ್ರೀಕಂಠಯ್ಯ

---

## ನಿಮ್ಮ ಪತ್ರಗಳು

ಮಾನ್ಯರೇ,

ನಿಮ್ಮ ಪತ್ರಿಕೆ ಒಂದು ಉಪಯುಕ್ತ ಪತ್ರಿಕೆ. ಇದು ಕನ್ನಡದಲ್ಲಿ ವಿಶೇಷ ಪ್ರಯತ್ನ. ಹೆಚ್ಚು ಹೆಚ್ಚು ವಿಚಾರಗಳನ್ನು ಒಳಗೊಂಡು ನಿಮ್ಮ ಪತ್ರಿಕೆ ಎಲ್ಲ ರಿಗೂ ತಲುಪಲಿ. ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಕೂರುವ ಅಭ್ಯರ್ಥಿಗಳಿಗಂತೂ ನಿಮ್ಮ ಪತ್ರಿಕೆ ಚಿನ್ನದ ಗಣಿ.

ಬೆಂಗಳೂರು – ಆರ್. ಕೆ. ರಮೇಶ್

---

### ಸಾಮಾನ್ಯ ಜ್ಞಾನ

ನವೆಂಬರ್ 1985 ರಿಂದ ಬಿಡಿ ಪ್ರತಿಯ ಬೆಲೆಯನ್ನು
ಒಂದು (1-00) ರೂ.ಗೆ ಏರಿಸಲಾಗಿದೆ
ಓದುಗರು ಸಹಕರಿಸಬೇಕು

– ಸಂ.

---

# ಕನ್ನಡ ಭಾಷೆಯ ಬಗ್ಗೆ ಕೆಲವು ಮೂಲಭೂತ ಸಂಗತಿಗಳು

ಡಾ|| ಎಂ. ಚಿದಾನಂದಮೂರ್ತಿ

೧. ಕನ್ನಡ ಒಂದು ದ್ರಾವಿಡ ಭಾಷೆ. ಕನ್ನಡ, ತಮಿಳು, ಮಲೆಯಾಳಂ, ತುಳು, ತೊದ, ಕೋತ, ಬಡಗ, ಕೊಡಗು, ಕೊಲಾಮಿ, ಗದಬ, ಬ್ರಾಹೂಇ, ಕುರುಖ್, ಮಾಲ್ತೊ ಇವೇ ಮೊದಲಾದ ಸುಮಾರು ೨೪ ಭಾಷೆಗಳನ್ನು ದ್ರಾವಿಡ ಭಾಷೆಗಳೆಂದು ಕರೆಯುತ್ತಾರೆ. ಇವು ಸಂಸ್ಕೃತ, ಹಿಂದಿ, ಕಾಶ್ಮೀರಿ, ಮರಾಠಿ, ಕೊಂಕಣಿ, ಗುಜರಾತಿ, ಪಂಜಾಬಿ, ಬೆಂಗಾಲಿ, ಒರಿಯ ಮೊದಲಾದ ಆರ್ಯನ್ ಭಾಷೆಗಳಿಂದ ಬೇರೆ. ಅನೇಕ ಆರ್ಯನ್ ಪದಗಳು ದ್ರಾವಿಡ ಭಾಷೆಗಳಲ್ಲೂ ಅನೇಕ ದ್ರಾವಿಡ ಪದಗಳು ಆರ್ಯನ್ ಭಾಷೆಗಳಲ್ಲೂ ಸೇರಿಹೋಗಿವೆ.

೨. ದ್ರಾವಿಡ ಭಾಷೆಗಳಲ್ಲಿ ಕನ್ನಡ, ತಮಿಳು, ತೆಲುಗು, ಮಲೆಯಾಳಂ ಇವುಗಳಿಗೆ ಮಾತ್ರ ಸ್ವತಂತ್ರ ಲಿಪಿಯಿದ್ದು, ಇವುಗಳು ಅನೇಕ ನೂರು ವರ್ಷಗಳಷ್ಟು ಹಳೆಯದಾದ ಲಿಖಿತ ಸಾಹಿತ್ಯವನ್ನು ಹೊಂದಿರುತ್ತವೆ. ಉಳಿದ ಭಾಷೆಗಳಿಗೆ ಲಿಖಿತವಾದ ಹಿಂದಿನ ಸಾಹಿತ್ಯವಿಲ್ಲ.

೩. ಪ್ರಾಚೀನತೆಯ ದೃಷ್ಟಿಯಿಂದ ಭಾರತದಲ್ಲಿ ಸಂಸ್ಕೃತ ಅತ್ಯಂತ ಪ್ರಾಚೀನ ಭಾಷೆ (ಕ್ರಿ.ಪೂ. ೧೫೦೦-೧೦೦೦); ಅದನ್ನು ಬಿಟ್ಟರೆ ತಮಿಳು (ಕ್ರಿ.ಶ. ೧೦೦) ಅದನ್ನು ಬಿಟ್ಟರೆ ಕನ್ನಡ (ಕ್ರಿ.ಶ. ೪೫೦).

೪. ಕನ್ನಡ ಭಾಷೆಯ ಒಂದು ಊರಿನ ಹೆಸರು ಕ್ರಿ.ಪೂ. ಮೂರನೇ ಶತಮಾನದ ಅಶೋಕನ ಬ್ರಹ್ಮಗಿರಿ ಶಾಸನದಲ್ಲಿ ದೊತಕುತ್ತದೆ. ಮೊದಲ ಕನ್ನಡ ಶಾಸನ ಬೇಲೂರು ತಾಲ್ಲೂಕು ಹಲ್ಮಿಡಿ ಎಂಬ ಗ್ರಾಮದಲ್ಲಿ ದೊರಕಿದ್ದು, ಅದು "ಹಲ್ಮಿಡಿ ಶಾಸನ"ವೆಂದೇ ಪ್ರಖ್ಯಾತವಾಗಿದೆ. ಅದರ ಕಾಲ ಕ್ರಿ.ಶ. ೪೫೦: ಆ ಕಾಲಕ್ಕೆ ಕನ್ನಡ ಒಂದು ನೆಲೆನಿಂತ ಭಾಷೆಯಾಗಿದ್ದು, ಮುಂದೆ ಅದು ಬೆಳವಣಿಗೆಯನ್ನು ಪಡೆಯುತ್ತಾ ಹೋಯಿತು. ಆ ಶಾಸನದಲ್ಲಿ ವಿಜ ಅರಸ ಎಂಬ ವೀರನೊಬ್ಬನು ಹೋರಾಟ ನಡೆಸಿ ತನ್ನ ಕದಂಬ ದೊರೆಗೆ ಜಯವನ್ನು ಸಂಪಾದಿಸಿಕೊಟ್ಟದ್ದಕ್ಕೆ ದತ್ತಿ ಕೊಡಲಾಗಿದೆ.

೫. ಹಲ್ಮಿಡಿ ಶಾಸನದ ಕನ್ನಡವನ್ನು ಪೂರ್ವದ ಹಳಗನ್ನಡವೆಂದು ಕರೆಯುತ್ತಾರೆ. ಪೂರ್ವದ ಹಳಗನ್ನಡ ಭಾಷೆಯಲ್ಲಿ ಯಾವ ಸಾಹಿತ್ಯ ಕೃತಿಯೂ ಸಿಕ್ಕಿಲ್ಲ; ಕೇವಲ ಶಾಸನಗಳು ಮಾತ್ರ ಲಭ್ಯವಾಗಿವೆ.

೬. ಪೂರ್ವದ ಹಳಗನ್ನಡವು ಬದಲಾವಣೆ ಹೊಂದಿ ಎಂಟನೇ ಶತಮಾನದಲ್ಲಿ ಹಳಗನ್ನಡವಾಯಿತು. ಹಳಗನ್ನಡದಲ್ಲಿ ನಮಗೆ ವಿಪುಲ ಸಾಹಿತ್ಯ ದೊರಕುತ್ತದೆ. ಕನ್ನಡದ ಮೊದಲ ಕೃತಿಯಾದ "ಕವಿರಾಜಮಾರ್ಗ"ವನ್ನು ಶ್ರೀ ವಿಜಯ ಎಂಬಾತ ರಾಷ್ಟ್ರಕೂಟ ಚಕ್ರವರ್ತಿ ಅಮೋಘವರ್ಷ ನೃಪತುಂಗನ ಆಸ್ಥಾನದಲ್ಲಿದ್ದು, ಅವನ ಸೂಚನೆಯಂತೆ ರಚನೆ ಮಾಡಿದ. ಅದರ ಕಾಲ ಕ್ರಿ.ಶ. ೮೫೦. ಆ ಹೊತ್ತಿಗೆ ಅನೇಕ ಸಾಹಿತ್ಯ ಕೃತಿಗಳು ಕನ್ನಡದಲ್ಲಿ ರಚನೆಯಾಗಿದ್ದರೂ ಅವು ಯಾವುವೂ ನಮಗೆ ಲಭ್ಯವಾಗಿಲ್ಲ.

೭. "ಕವಿರಾಜಮಾರ್ಗ" ಕಾವ್ಯ ಮೀಮಾಂಸೆಯ ವಿಷಯ ಹೇಳುವ ಕೃತಿ. ಒಂಭತ್ತನೇ ಶತಮಾನದ ಬಳಿಕ ನಮಗೆ ಕನ್ನಡ ಸಾಹಿತ್ಯ ದೊರಕಲು ಆರಂಭ. ಪಂಪ ಭಾರತವನ್ನು ಬರೆದ ಪಂಪ, ಶಾಂತಿ ಪುರಾಣವನ್ನು ಬರೆದ ಪೊನ್ನ, ಗದಾಯುದ್ಧವನ್ನು ಬರೆದ ರನ್ನ ಇವರೆಲ್ಲ ಹತ್ತನೆಯ ಶತಮಾನದವರು. ಇವರನ್ನು ಕನ್ನಡ ಸಾಹಿತ್ಯದ ರತ್ನತ್ರಯರೆಂದು ಕರೆದಿದ್ದಾರೆ.

೮. ಹನ್ನೊಂದನೇ ಶತಮಾನದಲ್ಲಿ ಹಳಗನ್ನಡವು ನಡುಗನ್ನಡವಾಯಿತು. ನಡುಗನ್ನಡವು ಬಹುವಾಗಿ ಹೊಸಗನ್ನಡವನ್ನು ಹೋಲುತ್ತದೆ. ನಡುಗನ್ನಡದಲ್ಲಿ ಹನ್ನರಡನೇ ಶತಮಾನದಲ್ಲಿ ವಚನ ಸಾಹಿತ್ಯವು ಸೃಷ್ಟಿಯಾಯ್ತು. ಬಸವ, ಅಲ್ಲಮ, ಸಿದ್ಧರಾಮ, ಮಹಾದೇವಿಯಕ್ಕ ಈ ಕಾಲದದವರು.

೯. ೧೭-೧೮ನೇ ಶತಮಾನದಿಂದ ಹೊಸಗನ್ನಡ ಯುಗ ಆರಂಭ.

೧೦. ಸಂಸ್ಕೃತ, ಪ್ರಾಕೃತ, ಮರಾಠಿ, ತೆಲುಗು, ತಮಿಳು, ಪೋರ್ಚುಗೀಸ್, ಹಿಂದೂಸ್ತಾನಿ, ಇಂಗ್ಲಿಷ್ ಇವೇ ಮೊದಲಾದ ಭಾಷೆಗಳಿಂದ ಕನ್ನಡವು ಯತೇಷ್ಟವಾಗಿ ವಾಗಿ ಪದಗನ್ನು ಸ್ವೀಕರಿಸಿ ಬೆಳೆದಿದೆ; ಇನ್ನೂ ಬೆಳೆಯುತ್ತಲೇ ಇದೆ. ಪ್ರತಿಯೊಂದು ಭಾಷೆಯೂ ಬೆಳೆಯುವುದು ಹೀಗೆಯೇ. *

# ಕೇಂದ್ರ ಮಂತ್ರಿ ಮಂಡಲ

(25–9–1985 ರಲ್ಲಿ ಬದಲಾವಣೆ ಆದಂತೆ)

**ಸಂಪುಟ ದರ್ಜೆ :**

| | | |
|---|---|---|
| ರಾಜೀವ ಗಾಂಧೀ | : | ಪ್ರಧಾನ ಮಂತ್ರಿ ಹಾಗೂ ರಕ್ಷಣೆ, ವಿಜ್ಞಾನ, ತಂತ್ರ ಜ್ಞಾನ ಯೋಜನೆ, ಸಿಬ್ಬಂದಿ ಹಾಗೂ ಆಡಳಿತ ಸುಧಾರಣೆ, ಮತ್ತು ಪರಿಸರ ಹಾಗೂ ಅರಣ್ಯ ಇಲಾಖೆ |
| ಬೂಟಾಸಿಂಗ್ | : | ವ್ಯವಸಾಯ ಹಾಗೂ ಗ್ರಾಮೀಣಾಭಿವೃದ್ಧಿ |
| ವಸಂತ ಸಾಠೆ | : | ಇಂಧನ ಖಾತೆ |
| ಭಗತ್ ಬಿ. ಆರ್. | : | ವಿದೇಶಾಂಗ ಖಾತೆ |
| ವಿ. ಪಿ. ಸಿಂಗ್ | : | ಹಣಕಾಸು |
| ಮೋಶಿನಾ ಕಿದ್ವಾಯ್ (ಶ್ರೀಮತಿ) | : | ಆರೋಗ್ಯ ಮತ್ತು ಕುಟುಂಬ ಕಲ್ಯಾಣ |
| ಎಸ್. ಬಿ. ಚವ್ಹಾಣ್ | : | ಗೃಹಖಾತೆ |
| ಪಿ. ವಿ. ನರಸಿಂಹರಾವ್ | : | ಮಾನವ ಶಕ್ತಿ ಸಂಪತ್ತು ಅಭಿವೃದ್ಧಿ |
| ಎನ್. ಡಿ. ತಿವಾರಿ | : | ಕೈಗಾರಿಕೆ |
| ಅಶೋಕ ಸೇನ್ | : | ಕಾನೂನು ಮತ್ತು ನ್ಯಾಯ |
| ಎಚ್. ಕೆ. ಎಲ್. ಭಗತ್ | : | ಸಂಸದೀಯ ವ್ಯವಹಾರ ಹಾಗೂ ಪ್ರವಾಸೋದ್ಯಮ |
| ಎ.ಬಿ.ಎ. ಘನಿಖಾನ್ ಚೌಧರಿ | : | ಕಾರ್ಯಕ್ರಮಗಳ ಜಾರಿಗೊಳಿಸುವ ಇಲಾಖೆ. |
| ಕೆ. ಸಿ. ಪಂತ್ | : | ಉಕ್ಕು ಮತ್ತು ಗಣಿ |
| ಬನ್ಸಿಲಾಲ್ | : | ಸಾರಿಗೆ, ರೈಲ್ವೇ ಹಾಗೂ ನಾಗರೀಕ ವಿಮಾನ ಯಾನ |
| ಅಬ್ದುಲ್ ಗಫೂರ್ | : | ನಗರಾಭಿವೃದ್ಧಿ |
| ಬಿ. ಶಂಕರಾನಂದ | : | ಜನ ಸಂಪತ್ತು ಇಲಾಖೆ |

**ರಾಜ್ಯ ಸಚಿವರು :**

(ಸ್ವತಂತ್ರ ಅಧಿಕಾರ)

| | | |
|---|---|---|
| ವಿ. ಎನ್. ಗಾಡ್ಗಿಲ್ | : | ವಾರ್ತಾ ಮತ್ತು ಪ್ರಸಾರ ಇಲಾಖೆ |
| ಕುರ್ಶಿದ್ ಆಲಂ ಖಾನ್ | : | ವಾಣಿಜ್ಯ |
| ಆರ್. ಎನ್. ಮಿರ್ಧಾ | : | ಸಂಪರ್ಕ ಖಾತೆ |
| ಕೆ. ಪಿ. ಸಿಂಗ್ ಡಿಯೋ | : | ಆಹಾರ ಹಾಗೂ ನಾಗರಿಕ ಪೂರೈಕೆ |
| ಟಿ. ಅಂಜಯ್ಯ | : | ಕಾರ್ಮಿಕ |
| ನವಾಲ್ ಕಿಸೋರ್ ಶರ್ಮ | : | ಪೆಟ್ರೋಲಿಯಂ |
| ರಾಜೇಂದ್ರ ಕುಮಾರಿ ಬಾಜಪೈ | : | ಕ್ಷೇಮಾಭಿವೃದ್ಧಿ |

**ರಾಜ್ಯ ಸಚಿವರು :**

| | | |
|---|---|---|
| ಯೋಗೇಂದ್ರ ಮಖ್ವಾನಾ | : | ವ್ಯವಸಾಯ |
| ನಟವರ ಸಿಂಗ್ | : | ರಸಗೊಬ್ಬರ |
| ಸಿ. ಎಲ್. ಚಂದ್ರಾಕರ್ | : | ಗ್ರಾಮೀಣಾಭಿವೃದ್ಧಿ |
| ಆರಿಫ್ ಮೊಹಮದ್ ಖಾನ್ | : | ಶಕ್ತಿ |
| ಕೆ. ಆರ್. ನಾರಾಯಣ್ | : | ವಿದೇಶಾಂಗ ಖಾತೆ |
| ಜನಾರ್ಧನ ಪೂಜಾರಿ | : | ಬ್ಯಾಂಕು ಮತ್ತು ವಿಮಾ ವಿಭಾಗ |
| ಎ. ಕೆ. ನೆಹರು | : | ಆಂತರಿಕ ಭದ್ರತೆ, ಪೋಲೀಸು, ಪುನರ್ವಸತಿ ಮತ್ತು ಕಾನೂನು ಮತ್ತು ಶಿಸ್ತು |
| ಪಿ. ಎ. ಸಂಗ್ಮಾ | : | ರಾಜ್ಯಗಳು ಮತ್ತು ಪ್ರಾಂತ್ಯಗಳು, ಕೇಂದ್ರ ಹಾಗೂ ರಾಜ್ಯಗಳ ಸಂಬಂಧಗಳು, ಭಾಷೆಗಳು (ಅಧಿಕೃತ) ಮತ್ತು ಜನಗಣತಿ |
| ಸುಶೀಲಾ ರೋಹಟ್ಗಿ | : | ವಿದ್ಯಾಭ್ಯಾಸ ಮತ್ತು ಸಂಸ್ಕೃತಿ |
| ಮಾಗರೆಟ್ ಆಳ್ವ | : | ಯುವ ವ್ಯವಹಾರ, ಕ್ರೀಡೆ ಹಾಗೂ ಮಹಿಳಾ ವಿಭಾಗ |

| | | |
|---|---|---|
| ಆರ್. ಕೆ. ಜೈಚಂದ್ರ ಸಿಂಗ್ | : | ರಸಾಯನಿಕ ಇಲಾಖೆ |
| ಎಂ. ಅರುಣಾಚಲಂ | : | ಕೈಗಾರಿಕೆ |
| ಎಚ್. ಆರ್. ಭರದ್ವಾಜ್ | : | ಕಾನೂನು ಮತ್ತು ನ್ಯಾಯ |
| ಗುಲಾಂ ನಬಿ ಆಜಾದ್ | : | ಸಂಸದೀಯ ವ್ಯವಹಾರ (ಲೋಕಸಭೆ) |
| ಸೀತಾರಾಮ ಕೇಸರಿ | : | ಸಂಸದೀಯ ವ್ಯವಹಾರ (ರಾಜ್ಯಸಭೆ) |
| ರಾಂ ದುಲಾರಿ ಸಿಂಹ | : | ಗಣಿ |
| ಮಾಧವರಾವ್ ಸಿಂಧಿಯಾ | : | ರೈಲ್ವೆ ಇಲಾಖೆ |
| ರಾಜೇಶ್ ಪಿಲೋಟ್ | : | ಸಾರಿಗೆ (ಸರ್ಫೇಸ್) |
| ಜಗದೀಶ್ ಟೈಲರ್ | : | ನಾಗರಿಕ ವಿಮಾನಯಾನ |
| ಬಲ್ಬೀರ್ ಸಿಂಗ್ | : | ನಗರಾಭಿವೃದ್ಧಿ |
| ಸುಖರಾಮ್ | : | ರಕ್ಷಣಾ ಉತ್ಪಾದನೆ ಮತ್ತು ರಕ್ಷಣಾ ಪೂರೈಕೆ |
| ಅರುಣ್ ಸಿಂಗ್ | : | ರಕ್ಷಣಾ ಸಂಶೋಧನೆ ಮತ್ತು ಅಭಿವೃದ್ಧಿ ವ್ಯವಸ್ಥೆ |
| ಶಿವರಾಜ್ ಪಾಟೀಲ್ | : | ವಿಜ್ಞಾನ ಮತ್ತು ತಂತ್ರಜ್ಞಾನ, ಸಮುದ್ರ ಅಭಿವೃದ್ಧಿ, ಅಣುಶಕ್ತಿ, ಇಲೆಕ್ಟ್ರಾನಿಕ್ಸ್, ಬಾಹ್ಯಾಕಾಶ ಮತ್ತು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ |
| ಅಜಿತ್ ಪಾಂಜಾ | : | ಯೋಜನೆ |
| ಜಡ್. ಆರ್. ಅನ್ಸಾರಿ | ; | ಪರಿಸರ ಮತ್ತು ಅರಣ್ಯ |

**ಉಪಮಂತ್ರಿಗಳು :**

| | | |
|---|---|---|
| ಎಸ್. ಕೃಷ್ಣಕುಮಾರ್ | : | ಕುಟುಂಬ ಕಲ್ಯಾಣ |
| ಪಿ. ಚಿದಂಬರಂ | : | ವಾಣಿಜ್ಯ |
| ಜಿ. ಗೋಮಾಂಗೋ | : | ಕ್ಷೇಮಾಭಿವೃದ್ಧಿ |

* *

(ಕೇಂದ್ರ ಮಂತ್ರಿ ಮಂಡಲವನ್ನು ಮತ್ತೆ ವಿಸ್ತರಿಸುವ ಸಂಭವವಿದೆ)

## ಮಾಸ ಜ್ಞಾನ (ಸೆಪ್ಟೆಂಬರ್ 1985)

27-9-85 : ಅಕಾಲಿ ದಳಕ್ಕೆ ನಿಚ್ಚಳ ಬಹುಮತ. ಸುರ್ಜಿತ್ ಸಿಂಗ್ ಅವರು ಪಂಜಾಬಿನ ಲೋಂಗೋವಾಲ್ ಅಕಾಲಿ ದಳದ ನಾಯಕರಾಗಿ ಆಯ್ಕೆಯಾದರು.

ಪಕ್ಷಗಳ ಬಲಾಬಲ : ಅಕಾಲಿ ದಳ – 73, ಕಾಂಗ್ರೆಸ್(ಇ) – 32 ಬಿಜೆಪಿ – 4, ಸಿಪಿಐ – 1, ಜೆಪಿ – 1, ಸ್ವತಂತ್ರ – 4.

28-9-85 : ಜಕಾರ್ತದಲ್ಲಿ ನಡೆದ "ಏಷ್ಯನ್ ಟ್ರ್ಯಾಕ್ ಮತ್ತು ಫೀಲ್ಡ್ ಚಾಂಪಿಯನ್‌ಷಿಪ್" ಸ್ಪರ್ಧೆಗಳಲ್ಲಿ ಚೀನಾ ಮೊದಲ ಸ್ಥಾನ ಗಳಿಸಿತು. ಭಾರತ ಈ ಸಾಲಿನಲ್ಲಿ ಎರಡನೇ ಸ್ಥಾನ ಗಳಿಸಿದೆ. ಭಾರತದ ಆಟಗಾರ್ತಿ ಪಿ.ಟಿ. ಉಷಾ 5 ಚಿನ್ನದ ಪದಕಗಳನ್ನು ಗಳಿಸಿದ್ದಾರೆ.

29-9-88 : ಪಂಜಾಬಿನಲ್ಲಿ ಆರು ಜನ ಮಂತ್ರಿಗಳ ಸರ್ಕಾರ ರಚನೆ (ಬರ್ನಾಲ ಮುಖ್ಯ ಮಂತ್ರಿ) ಹಾಗೂ ಅಧಿಕಾರ ಸ್ವೀಕಾರ.

ಭೂಥಾನ್ ದೇಶದ ಅತ್ಯುನ್ನತ ಪ್ರಶಸ್ತಿಯಾದ "ಡ್ರುಕ್ ವಾಗ್ಯಲ್" ಪ್ರಶಸ್ತಿಯನ್ನು (ಮರಣೋತ್ತರವಾಗಿ ಇಂದಿರಾ ಗಾಂಧೀ ಅವರಿಗೆ ನೀಡಲಾಗಿತ್ತು) ಭಾರತದ ಇಂದಿನ ಪ್ರಧಾನಿ ಶ್ರೀ ರಾಜೀವ್ ಗಾಂಧೀ ಅವರಿಂದ ಇಂದಿರಾ ಪರವಾಗಿ ಸ್ವೀಕಾರ.

---



---

2–10–85 ವರದಕ್ಷಿಣೆ ನಿಷೇಧದ ಕಾಯಿದೆ 1984 (ತಿದ್ದುಪಡಿ) ಜಾರಿಗೆ ಬಂದ ದಿನ. ಇದರ ಅನ್ವಯ ಮದುವೆಯ ಸಲುವಾಗಿ ಯಾವುದೇ ಆಸ್ತಿ ಅಥವಾ ಬೆಲೆ ಬಾಳುವ "ಕೊಡುಗೆ" ಗಳನ್ನು ವರ ಅಥವಾ ವಧುವಿ ಕೊಡುವುದು ಇಲ್ಲವೆ ಬೇರೆ ಯಾರಿಗಾದರು ಕೊಡುವುದು, ಹಾಗೆಂದು ಒಪ್ಪಂದ ಮಾಡಿಕೊಳ್ಳುವುದು ಕಾನೂನುಬಾಹಿರ ಆಗಿರುತ್ತದೆ.

ಲಾಸ್ ಏಂಜಲ್ಸ್‌ನಲ್ಲಿ ಹಾಲಿವುಡ್ ನಟ ರಾಕ್‌ಹಡ್ಸನ್ (59)ರ ನಿಧನ. 62 ಚಿತ್ರಗಳಲ್ಲಿ ನಟಿಸಿದ್ದರು ಅವರು ಏಡ್ಸ್ ಖಾಯಿಲೆಗೆ ತುತ್ತಾಗಿದ್ದರು.

6–10 85 ಹೊರದೇಶದಲ್ಲಿಯೇ ಅತ್ಯಂತ ದೊಡ್ಡ ಹಿಂದೂ ದೇವಾಲಯವನ್ನು ಲಂಡನ್‌ನಲ್ಲಿ ಕಟ್ಟಲು ಯೋಜಿಸಲಾಗಿದೆ. ಇದಕ್ಕಾಗಿ 50 ಲಕ್ಷ ಪೌಂಡ್‌ಗಳನ್ನು ವೆಚ್ಚಮಾಡಲು ಸ್ವಾಮಿ ನಾರಾಯಣ ದೇವಾಲಯವು ನಿಶ್ಚಯಿಸಿದೆ.

7–10–85 ಉತ್ತಮ ಆರ್ಥಿಕ ನೀತಿಗಳನ್ನು ರೂಪಿಸುವುದರಲ್ಲಿ ಭಾರತವು ಯಶಸ್ವಿ ಯಾಗುತ್ತಿದೆಯೆಂದು ವಿಶ್ವಬ್ಯಾಂಕ್‌ನ ಅಧ್ಯಕ್ಷ ಶ್ರೀ ಎ. ಡಬ್ಲ್ಯು. ಕ್ಲಾಸ್‌ನ್ ಅವರು ಹೇಳಿದ್ದಾರೆ. ಅಭಿವೃದ್ಧಿಗೊಳ್ಳುತ್ತಿರುವ ದೇಶಗಳ ಆರ್ಥಿಕ ಮುನ್ನಡೆಗೆ ಅವುಗಳ ಪ್ರಯತ್ನ ಹಾಗೂ ನಿರ್ಧಾರಗಳೇ ಆಧಾರವಾಗಿದೆ ಎಂದ ಅವರು ಭಾರತದಲ್ಲಿನ ವ್ಯವಸಾಯೋತ್ಪನ್ನಗಳು ಹೆಚ್ಚುತ್ತಿರುವ ಬಗೆಗೂ ಸಹ ಪ್ರಶಂಸಿಸಿದ್ದಾರೆ.

9–10–85 ಹಾಲಿವುಡ್‌ನಟ ಆರ್‌ಸನ್ ವೆಲ್ಸ್ (70) ಅವರ ನಿಧನ.

13–10–85 ಇರಾನ್ ಪ್ರಧಾನಿ ಹುಸೇನ್ ಮುಸಾವಿ ಅವರು ಎರಡನೇ ಬಾರಿಗೆ ಪ್ರಧಾನಿಯಾಗಿ ಚುನಾಯಿತರಾದರು.

14–10–85 1985ನೇ ಸಾಲಿನ "ವೈದ್ಯಕೀಯ ಶಾಸ್ತ್ರದ ನೊಬೆಲ್ ಪ್ರಶಸ್ತಿ" ಯನ್ನು ಅಮೇರಿಕಾದ ಮೈಕಲ್ ಎಸ್. ಬ್ರೌನ್ ಹಾಗೂ ಜೋಸೆಫ್ ಎಲ್. ಗೋಲ್ಡ್‌ಸ್ಟೀನ್ ಅವರಿಗೆ ಕೊಡಲಾಗಿದೆ. ಅವರಿಬ್ಬರೂ ಟೆಕ್ಸಾಸ್ ವಿಶ್ವವಿದ್ಯಾಯದ ಸೇವೆಯಲ್ಲಿದ್ದಾರೆ.

16-10-85 ಪ.ಜರ್ಮನಿಯ ಪ್ರೊ॥ ಕ್ಲಾಸ್‌ವಾನ್ ಲಿಜಿಂಗ್ ಅವರು 1985ನೇ ಸಾಲಿನ "ಭೌತಶಾಸ್ತ್ರದ ನೊಬೆಲ್ ಪ್ರಶಸ್ತಿ"ಯನ್ನು ಪಡೆದಿದ್ದಾರೆ. ಬ್ರನ್ಸ್‌ವಿಕ್‌ನ ತಾಂತ್ರಿಕ ವಿಶ್ವವಿದ್ಯಾಲಯದಲ್ಲಿ ವ್ಯಾಸಂಗ ಮಾಡಿದ ಇವರು ಈಗ ಪಶ್ಚಿಮ ಜರ್ಮನಿಯ ಮ್ಯಾಕ್ಸ್ ಪ್ಲಾಂಕ್ ಸಂಶೋಧನಾ ಸಂಸ್ಥೆಯಲ್ಲಿದ್ದಾರೆ.

ಇದೇ ಸಾಲಿಗೆ (1985) "ರಸಾಯನಶಾಸ್ತ್ರದ ನೊಬೆಲ್ ಪ್ರಶಸ್ತಿ" ಯನ್ನು ಅಮೇರಿಕಾದ ಸಂಶೋಧಕರಾದ ಹರ್ಬರ್ಟ್ ಹಾಪ್ಟ್‌ಮನಾ ಹಾಗೂ ಜರೋಮ್ ಕಾರ್ಲ್ಲೆರ ಪಡೆದಿದ್ದಾರೆ. ಹಾಪ್ಟ್‌ಮನ್‌ರು ನ್ಯೂಯಾರ್ಕ್ ಸ್ಟೇಟ್ ವಿಶ್ವವಿದ್ಯಾಲಯದಲ್ಲೂ ಜರೋಮ್ ಬಫಲೋದ ಕಾರ್ಲ್ಲರು ವಾಷಿಂಗ್‌ಟನಾ ನಾವೆಲಾ ಪ್ರಯೋಗ ಶಾಲೆಯ ಸೇವೆಯಲ್ಲಿದ್ದಾರೆ.

17-10-85 ಫ್ರೆಂಚ್‌ನ ಖ್ಯಾತ ಕಾದಾಂಬರಿಗಾರ ಕ್ಲಾಡ್‌ಸಿಮನ್ ಅವರು 1985ರ "ನೊಬೆಲ್ ಸಾಹಿತ್ಯ ಪ್ರಶಸ್ತಿ"ಯನ್ನು ಪಡೆದಿದ್ದಾರೆ. 1941ರಿಂದ ಬರೆಹಗಳಲ್ಲಿ ತೊಡಗಿದ ಸಿಮನ್‌ರು ಈವರೆಗೆ 14 ಕಾದಾಂಬರಿಗಳನ್ನು ಫ್ರೆಂಚ್ ಸಾಹಿತ್ಯಕ್ಕೆ ನೀಡಿದ್ದಾರೆ.

17-10-85 ಇಟಲಿಯ ಪ್ರಧಾನಿ ಬೆಟ್ಟಿನೋಕ್ರಾಕ್ಸಿ ತಮ್ಮ ಸರ್ಕಾರದ ರಾಜೀನಾಮೆ ಯನ್ನು ಅಲ್ಲಿನ ಅಧ್ಯಕ್ಷರಾದ ಫ್ರಾನ್ಸೆಸ್ಕೊ ಕೊಸಿಗಾ ಅವರಿಗೆ ಸಲ್ಲಿಸಿದ್ದಾರೆ. ಕ್ರಾಕ್ಸಿ ಅವರನ್ನು ಅಧಿಕಾರದಲ್ಲಿ ಮುಂದುವರೆಯಲು ಸೂಚಿಸಬಹುದಂತಹ ಅಧಿಕಾರವನ್ನು ಅಲ್ಲಿನ ಅಧ್ಯಕ್ಷರು ಹೊಂದಿರುತ್ತಾರೆ.

18-10-85 ದಕ್ಷಿಣ ಆಫ್ರಿಕಾದ ಕವಿ ಬೆಂಜೆಮಿನ್ ಮೊಲೈಸಿ ಅವರನ್ನು ಗಲ್ಲಿಗೇರಿಸಿದ ದಿನ. 1982ರಲ್ಲಿ ರಕ್ಷಕದಳವನೊಬ್ಬನನ್ನು ಕೊಲೆಮಾಡಿದ ಅಪರಾಧಕ್ಕಾಗಿ ಜೊಹಾನ್ಸ್‌ಬರ್ಗ್‌ನ ಪ್ರಿಟೋರಿಯಾ ಜೈಲಿನಲ್ಲಿ ಮೊಲೈಸಿ ಅವರಿಗೆ ಈ ಶಿಕ್ಷೆ ವಿಧಿಸಲಾಯಿತು. ವಿಶ್ವದಾದ್ಯಂತ ಅನೇಕ ರಾಷ್ಟ್ರಗಳು ಈ ಮುಂಚೆ ಅವರಿಗೆ ಕ್ಷಮೆ ತೋರುವಂತೆ ದ.ಆಫ್ರಿಕಾ ಸರ್ಕಾರವನ್ನು ಕೇಳಿಕೊಂಡಿತ್ತು.

18-10-85 ಪ್ರಸಿದ್ಧ ಗಂಗಾನದಿಯ ನೀರನ್ನು ಹಂಚಿಕೊಳ್ಳುವ ಬಗ್ಗೆ ಒಂದು ಒಪ್ಪಂದವನ್ನು ಭಾರತ ಹಾಗೂ ಬಾಂಗ್ಲಾದ ಅಧ್ಯಕ್ಷ ಶ್ರೀ ಹೆಚ್.

ಎಂ. ಈರ್ಷಾದ್‌ರವಲ್ಲಿ "ನಾಸಾ" ನಲ್ಲಿ ಆದ ಈ ಒಪ್ಪಂದವು ಮುಂದಿನ ಮೂರು ವರ್ಷಗಳವರೆಗೆ ಇರುತ್ತದೆ.

ಅಲಹಾಬಾದ್ ಹೈಕೋರ್ಟಿನಲ್ಲಿ 17-10-85 ರಂದು ನ್ಯಾಯ ಮೂರ್ತಿ ಶ್ರೀ ಖನ್ವಾರಿಲಾಲ್‌ಯಾದವ್ ಅವರು ದೇವನಾಗರಿ (ಸಂಸ್ಕೃತ) ಭಾಷೆಯಲ್ಲಿ (ಐದು ಬಟ್ಟೆಗಳನ್ನು ಸಂಬಂಧಿಸಿದಂತೆ.) ತೀರ್ಪನ್ನಿತ್ತಿದ್ದಾರೆ. ಇದು ಒಂದು ಚರಿತ್ರಾರ್ಹವೆಂದು ಹೇಳ ಲಾಗಿದೆ. ಶ್ರೀ ಯಾದವ್ ಅವರು ಆವರ ತೀರ್ಪಿನ ಆಂಗ್ಲ ಹಾಗೂ ಹಿಂದಿ ಭಾಷಾಂತರಗಳನ್ನು ಸಹ ನೀಡಿದ್ದಾರೆ. ಅವರು ಸಂಸ್ಕೃತ ವಿಷಯದೊಂದಿಗೆ ಪದವೀಧರರಾಗಿದ್ದಾರೆ.

21-10-85 ಪಶ್ಚಿಮ ವಲಯ ಕ್ರಿಕೆಟ್ ತಂಡವು ದುಲಿಪ್ ಟ್ರೋಫಿಯನ್ನು ಗೆದ್ದುಕೊಂಡಿದೆ. ಬೆಂಗಳೂರಿನಲ್ಲಿ ನಡೆದ ಅದು ದಕ್ಷಿಣ ವಲಯದ ವಿರುದ್ಧ ಒಂಭತ್ತು ವಿಕೆಟ್ಟುಗಳ ಜಯಪಡೆಯಿತು.

ಬೆಂಗಳೂರಿನ ಗಾಯನ ಸಮಾಜವು ತನ್ನ 17ನೇ ಸಂಗೀತ ಸಮ್ಮೇಳನ ದಲ್ಲಿ "ಸಂಗೀತ ಕಲಾರತ್ನ" ಎಂಬ ಬಿರುದನ್ನು ಖ್ಯಾತ ಹಿಂದೂಸ್ಥಾನಿ ಗಾಯಂಕಿ ಡಾ|| ಗಂಗೂಬಾಯಿ ಹಾನಗಲ್ ಅವರಿಗೆ ನೀಡಿತು.

23-10-85 ಐತಿಹಾಸಿಕ ಮೈಸೂರು ದಸರಾ ಉತ್ಸವವನ್ನು ಭಾರತದ ರಾಷ್ಟ್ರಾಧ್ಯಕ್ಷ ಗ್ಯಾನಿ ಜೇಲ್‌ಸಿಂಗ್ ವಿಕ್ಷೀಸಿದರು. (ಮೈಸೂರು ದಸರಾ ಉತ್ಸವವನ್ನು ವೀಕ್ಷಿಸಿದ ಮೊದಲ ರಾಷ್ಟ್ರಾಧ್ಯಕ್ಷರಾಗಿದ್ದಾರೆ.

24-10-85 ವಿಶ್ವಸಂಸ್ಥೆಯ 40ನೇ ವಾರ್ಷಿಕೋತ್ಸವದಲ್ಲಿ ಭಾರತದ ಪ್ರಧಾನಿ ರಾಜೀವಗಾಂಧೀ ಅವರು ಭಾಷಣ ಮಾಡಿದರು.

ಕ್ರೀಡಾಪಟುಗಳಾದ ಪಿ. ಟಿ. ಉಷಾ ಹಾಗೂ ಶಿನಿ ಅವರುಗಳಿಗೆ ಕ್ರಮವಾಗಿ 1983 ಹಾಗೂ 1984ರ "ಅರ್ಜುನ ಪ್ರಶಸ್ತಿ" ನೀಡ ಲಾಗಿದೆ.

25-10-85 ವಿಶ್ವಸಂಸ್ಥೆಯ 40ನೇ ವಾರ್ಷಿಕೋತ್ಸವದ ನೆನಪಿನ ಅಂಗವಾಗಿ "1986" ಈ ಇಸವಿಯನ್ನು ಅಂತರರಾಷ್ಟ್ರೀಯ ಶಾಂತಿ ವರ್ಷ ವನ್ನಾಗಿ ಆಚರಿಸಲು ಆ ಸಂಸ್ಥೆಯ ಪ್ರಧಾನ ಸಭೆಯು ನಿರ್ಧರಿಸಿದೆ. "ಬಾಲ್‌ಪೆನ್ ಸಂಶೋಧಕ ಜೆ. ಎಲ್. ಬಿರೋ (86) ಅವರ ನಿಧನ.

-0-

ನಿಮಗಾಗಿ–

ಈ ಕೆಳಗೆ ಕೆಲವು ಪ್ರಶ್ನಾವಳಿಗಳನ್ನು ಕೊಡಲಾಗಿದೆ. ಸರಿಯಾದ ಉತ್ತರವನ್ನು ಆರಿಸುವುದರ ಮೂಲಕ ನಿಮ್ಮ ಬುದ್ಧಿ ಶಕ್ತಿಯನ್ನು ಪರೀಕ್ಷಿಸಿಕೊಳ್ಳಿ. ನಿಮ್ಮ ಉತ್ತರ ಐದು ಬಂದರೆ ಉತ್ತಮ, ಆರಕ್ಕಿಂತ ಹೆಚ್ಚಾದರೆ ಶ್ರೇಷ್ಠ ಎಂದು ಭಾವಿಸಿಕೊಳ್ಳಿ.

1. ಅರಿಸ್ಟಾಟಲ್ ಇವರು

ಅ) ಅರ್ಥಶಾಸ್ತ್ರಜ್ಞ ಆ) ಗ್ರೀಕ್ ತತ್ವಶಾಸ್ತ್ರಜ್ಞ
ಇ) ಬಾಹ್ಯಾಕಾಶ ವಿಜ್ಞಾನಿ

2. ಪಾಣಿನಿ ಇವರು

ಅ) ಭಾರತ ಸ್ವಾತಂತ್ರ್ಯ ಹೋರಾಟಗಾರರು
ಆ) ಪಾರ್ಸಿ ಮತಸ್ಥಾಪಕರು ಇ) ಸಂಸ್ಕೃತ ವ್ಯಾಕರಣಕಾರರು

3. "ಗೀತ ಗೋವಿಂದ" ಇದನ್ನು ರಚಿಸಿದ ಸಂಸ್ಕೃತ ಕವಿ

ಅ) ಭಾರವಿ ಅ) ಮಾಘ ಇ) ಜಯದೇವ

4. ....ರಲ್ಲಿ ಭಾರತದಲ್ಲಿ ಪ್ರಥಮ ರೈಲು ಸಂಚಾರ ಆರಂಭವಾಯಿತು

ಅ) 1853 ಆ) 1847 ಇ) 1899

5. ಭಾರತದ ರಾಷ್ಟ್ರಧ್ವಜದ ವಿನ್ಯಾಸ ಅಂಗೀಕಾರವಾಗಿದ್ದು ........ರಲ್ಲಿ

ಅ) 22-7-1947 ಆ) 15-8-1947 ಇ) 2-10-1947

6. ಇತ್ತೀಚೆಗೆ ಬಿಲಿಯರ್ಡ್ಸ್‌ನಲ್ಲಿ ವಿಶ್ವ ಛಾಂಪಿಯನ್ ಆದ ಭಾರತೀಯ

ಅ) ಸುರೇಶ್ ಅಗರ್‌ವಾಲ್ ಆ) ಮೈಕಲ್ ಪೆರೆಲಾ
ಇ) ಗೀತ್ ಸೇಥಿ

7. ಭಾರತೀಯ ರಿಸರ್ವ್ ಬ್ಯಾಂಕ್ ಸ್ಥಾಪಿತವಾದುದು ........ರಲ್ಲಿ
ಅ) 1954 ಆ) 1935 ಇ) 1948

8. ಭಾರತದಲ್ಲಿ ಪ್ರಥಮವಾಗಿ ಒಟ್ಟಿಗೆ 14 ಬ್ಯಾಂಕುಗಳ ರಾಷ್ಟ್ರೀಕರಣವಾದದ್ದು ........ರಲ್ಲಿ
ಅ) 15-8-1947 ಆ) 19-7-1965 ಇ) 19-7-1969

9. ವಿಶ್ವ ಬ್ಯಾಂಕಿನ ಈಗಿನ ಅಧ್ಯಕ್ಷ
ಅ) ಪೀಟರ್ ಬೋಥಾ ಆ) ಆರ್. ಎಲ್. ಮಲ್ಹೋತ್ರ
ಇ) ಎ. ಡಬ್ಲ್ಯು. ಕ್ಲಾಸ್ಸ್

10. ಇದು ಈ ಗುಂಪಿಗೆ ಅನ್ವಯಿಸುವುದಿಲ್ಲ
ಅ) ಗ್ರೀನ್‌ಲ್ಯಾಂಡ್ ಆ) ಕ್ಯೂಬಾ ಇ) ಟೋಕಿಯೋ
ಈ) ಶ್ರೀಲಂಕ

(ಉತ್ತರಗಳು ಮುಂದಿನ ಸಂಚಿಕೆಯಲ್ಲಿ)

* * * *

- 1984 ರಲ್ಲಿ ಜಪಾನಿನ ಸುಮಾರು 24,500ಕ್ಕೂ ಹೆಚ್ಚು ಜನರು ಆತ್ಮ ಹತ್ಯೆ ಮಾಡಿಕೊಂಡಿದ್ದಾರೆ.
- ಪ್ರತಿ ವರ್ಷ ಪ್ರಪಂಚದಲ್ಲಿ 1,50,000 ಜನರು ರಸ್ತೆ ಅಪಘಾತಗಳಲ್ಲಿ ಮರಣಿಸುತ್ತಾರೆಂದು ವಿಶ್ವ ಆರೋಗ್ಯ ಸಂಸ್ಥೆಯು ತಿಳಿಸುತ್ತದೆ.
- ಮಹಾಭಾರತದ ಮುಖ್ಯ ಭಾಗವಾದ ಭಗವದ್ಗೀತೆಯನ್ನು ವಿಶ್ವದ ಸುಮಾರು 50 ಭಾಷೆಗಳಲ್ಲಿ ಪ್ರಕಟಿಸಲಾಗಿದೆ.
- ಭಾರತವು ರಫ್ತು ಮಾಡುವ ಸುಗಂಧ ಕಡ್ಡಿಗಳಲ್ಲಿ ಶೇಕಡ 85 ರಷ್ಟು ಕರ್ನಾಟಕದಲ್ಲಿ ತಯಾರಾದವು ಆಗಿರುತ್ತದೆ. ಮೈಸೂರು ಹಾಗೂ ಬೆಂಗಳೂರು ಅವುಗಳ ಉತ್ಪಾದನೆಯ ಮುಖ್ಯ ಕೇಂದ್ರಗಳು.

## ಶ್ರೀ ವೆಂಕಟೇಶ್ವರ ಬೇಕರಿ



ಹಲೋ... ರಾಮಕೃಷ್ಣ ಐಯ್ಯಂಗಾರ್ ಮಾತಾಡ್ತಾ ಇರೋದು...

# ನವಭಾರತದ ನಿರ್ಮಾಣದತ್ತ ಕೃಷಿ ಅಭಿವೃದ್ಧಿ

— ಡಾ॥ ಕೆ. ಪುಟ್ಟಸ್ವಾಮಯ್ಯ

(ಪ್ರಥಮ ಸಂಚಿಕೆಯಿಂದ)

ಕಳೆದ ಮೂರು ದಶಕಗಳ ಯೋಜನಾವಧಿಯಲ್ಲಿ ಕೃಷಿ ಕೈಗಾರಿಕೆ, ವಿಜ್ಞಾನ ಮತ್ತು ತಂತ್ರಜ್ಞಾನ, ಆರೋಗ್ಯ ಶಿಕ್ಷಣ ಈ ಮೊದಲಾದ ಕ್ಷೇತ್ರಗಳಲ್ಲಿ ಗಣನೀಯ ಅಭಿವೃದ್ಧಿಯಾಗಿ, ದೇಶದ ಆರ್ಥಿಕ ಮುನ್ನಡೆಯ ದಿಶೆಯಲ್ಲಿ ಸಾಕಷ್ಟು ಪ್ರಗತಿ ಕಂಡು ಬಂದಿದೆ. ರಾಷ್ಟ್ರೀಯ ಅಭಿವೃದ್ಧಿ ಮಂಡಳಿಯ ಸಭೆಯಲ್ಲಿ ಸಹ ಕೃಷಿ ಕ್ಷೇತ್ರದ ವಿಶೇಷ ಪ್ರಾಧಾನ್ಯತೆಯನ್ನು ನೀಡಲಾಗಿದೆ. ಶೇಕಡಾವಾರು ಅಭಿವೃದ್ಧಿಯನ್ನು ಹೆಚ್ಚಿಸುವುದು, ಬಡತನ ಮತ್ತು ನಿರುದ್ಯೋಗದ ಪ್ರಮಾಣವನ್ನು ಸಾಕಷ್ಟು ಮಟ್ಟಿಗೆ ಇಳಿಸುವುದು, ಜನರ ಜೀವನ ಮಟ್ಟವನ್ನು ಸುಧಾರಿಸುವುದು, ಬೇರೆ ಬೇರೆ ಪ್ರದೇಶಗಳ ನಡುವೆ ಇರುವ ಅಸಮಾನತೆಯ ಪ್ರಮಾಣವನ್ನು ಕಡಿಮೆ ಮಾಡುವುದು, ಜನಸಂಖ್ಯೆಯನ್ನು ನಿಯಂತ್ರಿಸುವುದು ಮತ್ತು ಅಭಿವೃದ್ಧಿ ಕಾರ್ಯ ಕ್ರಮಗಳಲ್ಲಿ ಜನರು ಪಾಲ್ಗೊಳ್ಳುವಂತೆ ಮಾಡುವುದು ಇವು ಮುಖ್ಯವಾದವುಗಳು. ಕೃಷಿ ಉತ್ಪನ್ನವನ್ನು ಮತ್ತು ಉತ್ಪಾದನಾ ಸಾಮರ್ಥ್ಯವನ್ನು ಹೆಚ್ಚಿಸುವ ಸಲು ವಾಗಿ ಭೂಸುಧಾರಣೆ ಕಾನೂನನ್ನು ತ್ವರಿತ ಗತಿಯಲ್ಲಿ ಜಾರಿಗೆ ತಂದು ಹೆಚ್ಚುವರಿ ಜಮೀನನ್ನು ಕೃಷಿ ಕಾರ್ಮಿಕರಿಗೆ ವಿತರಣೆ ಮಾಡಬೇಕಾಗಿದೆ. ಯೋಜನೆಗಳು ಬಡ ಜನತೆಗೆ ಎಲ್ಲಾ ರೀತಿಯಿಂದಲೂ ಸೌಲಭ್ಯ ಸೌಕರ್ಯಗಳನ್ನು ಕೊಡು ವಂತಿರಬೇಕು. ಕೃಷಿ ಕ್ಷೇತ್ರದಲ್ಲಿ ಸುಧಾರಣೆಗಳನ್ನು ತರುವಾಗ ನೀರಾವರಿಯ ಸದುಪಯೋಗ ಪಡೆದು ತಂತ್ರಜ್ಞಾನದ ಲಾಭವನ್ನು ಪಡೆದುಕೊಳ್ಳಬೇಕು. ಇದಕ್ಕೆ ಧನಸಹಾಯದ ಅವಶ್ಯಕತೆಯಿದೆ. ಅದಕ್ಕಾಗಿ ಸಹಕಾರಿ ಕ್ಷೇತ್ರದಲ್ಲಿ ಈ ಸಂಘ ಸಂಸ್ಥೆಗಳ ವ್ಯವಸ್ಥೆ ಆಗಬೇಕು. ರೈತರಿಗೆ ಅತ್ಯಗತ್ಯವಾದ ಮಾರುಕಟ್ಟೆಯ ಸೌಲಭ್ಯಗಳನ್ನು ಒದಗಿಸಿ ಕೊಡಬೇಕು. ಕೃಷಿ ಅಭಿವೃದ್ಧಿ ಆಗಬೇಕಾದರೆ ರೈತರಿಗೆ ಹಣ ಮತ್ತು ಮಾರುಕಟ್ಟೆಯ ಸೌಲಭ್ಯ ಬಹು ಸುಲಭವಾಗಿ ದೊರೆಯುವಂತಿರ ಬೇಕು. ಇವೆಲ್ಲವು ಕಷ್ಟಕರ ಕೆಲಸಗಳಾದರೂ ಸಹ ದೇಶದ ಆರ್ಥಿಕ ಹಿತದ ದೃಷ್ಟಿಯಿಂದ ಇವೆಲ್ಲವನ್ನು ಸಾಧಿಸಲೇಬೇಕಾಗಿದೆ. ಉತ್ಪಾದನೆಯ ಪ್ರಮಾಣದಲ್ಲಿ ತೀವ್ರತರ ಹೆಚ್ಚಳ ಆಗಬೇಕಾಗಿದೆ.

(ಮುಂದುವರಿಯುತ್ತದೆ)

## ಕಾಂಗ್ರೆಸ್ ಅಧ್ಯಕ್ಷರುಗಳು (1885 ರಿಂದ 1947ರ ವರೆಗೆ)
(1985 ಜುಲೈನಿಂದ ಮುಂದುವರಿಸಿದೆ)

| | |
|---|---|
| ಸರ್ ವಿಲಿಯಂ ವೆಡ್ಡೆರ್ ಬುರ್ನ್ | 1910 |
| ಬಿ. ಎನ್ ಧರ್ | 1911 |
| ಆರ್. ಎನ್. ಮಧೋಲ್‌ಕರ್ | 1912 |
| ನವಾಬ್ ಸಯಿದ್ ಮೊಹಮದ್ ಬಹದೂರಾ | 1913 |
| ಭೂಪೇಂದ್ರನಾಥ್ ಬಸು | 1914 |
| ಸರ್ ಎಸ್. ಪಿ. ಸಿಂಹ | 1915 |
| ಎ. ಸಿ, ಮಜುಂದಾರ್ | 1916 |
| ಶ್ರೀಮತಿ ಆ್ಯನಿಬೆಸೆಂಟ್ | 1917 |
| ಹಾಸನ್ ಇಮಾಂ (ವಿಶೇಷ ಸಭೆ) | 1918 |
| ಎಂ. ಎಂ. ಮಾಳವೀಯ (ವಾರ್ಷಿಕ ಸಭೆ) | 1918 |
| ಮೋತಿಲಾಲ್ ನೆಹರು | 1919 |

(ಮುಂದುವರಿಯುವುದು)

* *

## ಮೆಟ್ರಿಕ್ ಪದ್ಧತಿಯ ಅಳತೆ — ಉದ್ದ

| | | |
|---|---|---|
| 1 ಅಂಗುಲ | = | 2.54 ಸೆಂಟಿ ಮೀಟರ್ |
| 1 ಗಜ | = | 0.9144 ಮೀ. |
| 1 ಮೈಲು | = | 1.6093 |
| 1 ಮೀಟರ್ | = | 3.28084 ಅಡಿಗಳು |
| 1 ಮೀಟರ್ | = | 39.37 ಅಂಗುಲಗಳು |
| 1 ಕಿ. ಮೀ. | = | 0.6214 ಮೈಲು |
| 1 ಕಿ. ಮೀ. | = | 4.9712 ಫರ್ಲಾಂಗ್ |

ಆ) **ಅಳತೆ :**

| | | |
|---|---|---|
| 1 ಔನ್ಸ್ | = | 2.8.4122 ಮಿಲಿ ಲೀ. |
| 1 ಗ್ಯಾಲನ್ | = | 4,54596 ಲೀ. |
| 1 ಗ್ಯಾಲನ್ (ಅಮೆರಿಕ) | = | 3.78533 ಲೀ |

ಇ) **ತೂಕ :**

| | | |
|---|---|---|
| 1 ಔನ್ಸ್ | = | 28.3495 ಗ್ರಾಂಗಳು |
| 1 ಪೌಂಡ್ | = | 0.4535924 ಕಿ.ಗ್ರಾಂ |

## ಹಲವು ಮುಖ್ಯ ವಿಷಯಗಳು

| | | | |
|---|---|---|---|
| 1. | ನಕ್ಷತ್ರ | ಅತಿ ದೊಡ್ಡದು | ಡಾಗ್‌ಸ್ಟಾರ್ (ಸಿರಿಯಸ್) |
| 2. | ಗ್ರಹಗಳು | ಅತಿ ದೊಡ್ಡದು | ಗುರು |
| | | ಅತಿ ಚಿಕ್ಕದು | ಬುಧ |
| 3. | ಸಮುದ್ರಗಳು | ಅತಿ ದೊಡ್ಡದು | ಪೆಸಿಫಿಕ್ ಮಹಾಸಾಗರ |
| | | ಅತಿ ಆಳ | ಪೆಸಿಫಿಕ್ ಮಹಾಸಾಗರ |
| 4. | ಪರ್ವತಗಳು | ಅತಿ ಎತ್ತರ | ಹಿಮಾಲಯ (ಏಷ್ಯಾ) |
| | | ಅತಿ ದೊಡ್ಡದು | ಅಂಡೀಸ್ (ದ. ಅಮೆರಿಕ) |
| | | ಅತಿ ಎತ್ತರ ಶಿಖರ | ಮೌಂಟ್ ಎವರೆಸ್ಟ್ |
| 5. | ಅಣೆಕಟ್ಟು | ಅತಿ ದೊಡ್ಡ | ನ್ಯೂ ಕಾರ್ನೇಲಿಯಾ |
| | | ಅಣೆಕಟ್ಟು | ಪೈಲಿಂಗ್ (ಯು.ಎಸ್.ಎ.) |
| | | ಅತಿ ಎತ್ತರವಾದದ್ದು | ಭಾಕ್ರಾನಂಗಲ್ (ಭಾರತ) |
| | | ಅತಿ ಉದ್ದವಾದ ಅಣೆಕಟ್ಟು | ಹಿರಾಕುಡ್ (ಭಾರತ) |
| 6. | ಖಂಡಗಳು | ಅತಿ ದೊಡ್ಡ ಖಂಡ | ಏಷ್ಯಾ |
| | | ಅತಿ ಚಿಕ್ಕದು | ಆಸ್ಟ್ರೇಲಿಯಾ |
| 7. | ಜಲಪಾತಗಳು | ಅತಿ ಅಗಲ | ಕೋನ್ ಕಟರಾಕ್ಟ್ಸ್ (ಕಾಂಬೋಡಿಯಾ) |
| | | ಅತಿ ದೊಡ್ಡದು | ಆಯೂರ (ಬ್ರೆಜಿಲ್–ಪರಗ್ವೆ) |
| | | ಅತಿ ರಮ್ಯ | ಜೋಗ್ ಜಲಪಾತ (ಭಾರತ) |
| 8. | ಮರುಭೂಮಿ | ಅತಿ ದೊಡ್ಡದು | ಸಹರಾ |
| 9. | ಮೃಗ | ಅತಿ ಎತ್ತರ | ಜಿರಾಫೆ |
| 10. | ಅರಮನೆ | ಅತಿ ದೊಡ್ಡದಮೆ | ಟಗಾನ್ |

## ರಾಜ್ಯ, ಭಾಷೆ, ಇತ್ಯಾದಿ

| ರಾಜ್ಯ | ರಾಜಧಾನಿ | ಭಾಷೆ | ರಾಜ್ಯಪಾಲ | ಮುಖ್ಯಮಂತ್ರಿ |
|---|---|---|---|---|
| ಅಸ್ಸಾಂ | ದಿಸ್‌ಪುರ್ | ಅಸ್ಸಾಮಿ | ಭೀಷ್ಮ ನಾರಾಯಣ ಸಿಂಗ್ | ಹಿತೇಶ್ವರ ಸಾಕಿಯ |
| ಆಂಧ್ರಪ್ರದೇಶ | ಹೈದರಾಬಾದ್ | ತೆಲುಗು | ಶಂಕರ ದಯಾಳ್ ಶರ್ಮ | ಎನ್. ಟಿ. ರಾಮರಾವ್ |
| ಉತ್ತರಪ್ರದೇಶ | ಲಖ್ನೋ | ಹಿಂದಿ | ಮೊಹಮದ್ ಉಸ್ಮಾನ್ ಆರಿಫ್ | ವೀರ ಬಹದ್ದೂರ್ ಸಿಂಗ್ |
| ಒರಿಸ್ಸಾ | ಭುವನೇಶ್ವರ | ಒರಿಯಾ | ಬಿ. ಎನ್. ಪಾಂಡೆ | ಜೆ. ಬಿ. ಪಾಟ್ನಾಯಿಕ್ |
| ಕರ್ನಾಟಕ | ಬೆಂಗಳೂರು | ಕನ್ನಡ | ಎ. ಎನ್. ಬ್ಯಾನರ್ಜಿ | ರಾಮಕೃಷ್ಣ ಹೆಗಡೆ |
| ಕೇರಳ | ತಿರುವಾಂಕೂರು | ಮಲೆಯಾಳಂ | ಪಿ. ರಾಮಚಂದ್ರನ್ | ಕೆ. ಕರುಣಾಕರನ್ |
| ಗುಜರಾತ್ | ಗಾಂಧೀನಗರ | ಗುಜರಾತಿ | ಬಿ. ಕೆ. ನೆಹರು | ಅಮರ ಸಿನ್ಹ ಚೌಧರಿ |
| ಜಮ್ಮು ಮತ್ತು ಕಾಶ್ಮೀರ | ಶ್ರೀನಗರ | ಕಾಶ್ಮೀರಿ | ಜಗಮೋಹನ | ಜಿ. ಎಂ. ಷಹಾ |
| ತಮಿಳು ನಾಡು | ಮದರಾಸ್ | ತಮಿಳು | ಎಸ್. ಎಲ್. ಖುರಾನಾ | ಎಂ. ಜಿ. ರಾಮಚಂದ್ರನ್ |
| ತ್ರಿಪುರ | ಅಗರತಲ | ಬಂಗಾಳಿ | ಡಾ॥ ಕೆ. ವಿ. ಕೃಷ್ಣರಾವ್ | ನೃಪೇನ್ ಚಕ್ರವರ್ತಿ |

| | | | | |
|---|---|---|---|---|
| ಪಂಜಾಬ್ | ಚಂಡಿಘಡ | ಪಂಜಾಬಿ | ಅರ್ಜುನ್ ಸಿಂಗ್ | ಸುರ್ಜಿತ್ ಸಿಂಗ್ ಬರ್ನಾಲ |
| ಪಶ್ಚಿಮ ಬಂಗಾಳ | ಕಲ್ಕತ್ತ | ಬಂಗಾಳಿ | ಉಮಾಶಂಕರ ದೀಕ್ಷಿತ್ | ಜ್ಯೋತಿ ಬಸು |
| ಬಿಹಾರ್ | ಪಾಟ್ನಾ | ಹಿಂದಿ | ಪಿ. ವೆಂಕಟ ಸುಬ್ಬಯ್ಯ | ಬಿಂದೇಶ್ವರಿ ದುಬೈ |
| ನಾಗಾಲ್ಯಾಂಡ್ | ಕೊಹಿಮಾ | ನಾಗ | ಜ॥ ಕೆ. ವಿ. ಕೃಷ್ಣರಾವ್ | ಎಸ್. ಸಿ. ಜಮೀರ್ |
| ಮಹಾರಾಷ್ಟ್ರ | ಬೊಂಬಾಯಿ | ಮರಾಠಿ | ಕೋನ ಪ್ರಭಾಕರರಾವ್ | ಶಿವಾಜಿರಾವ್ ಪಾಟೀಲ್ ನಿಲಂಗೇಕರ್ |
| ಮಧ್ಯಪ್ರದೇಶ | ಭೂಪಾಲ | ಹಿಂದಿ | ಕೆ. ಎಂ. ಚಾಂಡಿ | ಮೋತಿಲಾಲ ವೋರ |
| ಮಣಿಪುರ | ಇಂಪಾಲ | ಮಣಿಪುರಿ | ಜ॥ ಕೆ. ವಿ, ಕೃಷ್ಣರಾವ್ | ರಿಶಾಂಗ್ ಕೆಶಿಂಗ್ |
| ಮೇಘಾಲಯ | ಶಿಲ್ಲಾಂಗ್ | ಖಿಷಿ | ಭೀಷ್ಮ ನಾರಾಯಣ ಸಿಂಗ್ | ವಿಲಿಯಂಸನ್ ಸಂಗ್ಮಾ |
| ರಾಜಸ್ಥಾನ | ಜೈಪುರ | ರಾಜಸ್ಥಾನಿ | ಓ. ಪಿ. ಮೆಹ್ರಾ | ಹರಿಡಿಯೋ ಜೋಷಿ |
| ಸಿಕ್ಕಿಂ | ಗಾಂಗ್‌ಟೆಕ್ | ಸಿಕ್ಕಿಮೀ | ಭೀಷ್ಮ ನಾರಾಯಣ ಸಿಂಗ್ | ಎನ್. ಬಿ. ಭಂಡಾರಿ |
| ಹರಿಯಾಣ | ?ಚಂಡಿಘಡ | ಹಿಂದಿ | ಎಸ್. ಎಂ. ಎಚ್. ಬುರ್ನೆ | ಭಜನ್‌ಲಾಲ |
| ಹಿಮಾಚಲ ಪ್ರದೇಶ | ಸಿಮ್ಲಾ | ಹಿಂದಿ | ಹೋಕಿಶೆ ಸೇಮಾ | ವೀರಭದ್ರಸಿಂಗ್ |

– ಕೆ. ವಿ.

# ಸಂಸದೀಯ ಸರಕಾರ ಹಾಗೂ ಅಧ್ಯಕ್ಷೀಯ ಸರಕಾರ

— ಬಿ. ಕಾ. ಮೂರ್ತೀಶ್ವರಯ್ಯ

ಈಗಿರುವ ನಮ್ಮ ಸಂಸದೀಯ ಪದ್ಧತಿಯ ಸರಕಾರಕ್ಕೆ ಬದಲಾಗಿ ಅಧ್ಯಕ್ಷೀಯ ಪದ್ಧತಿಯ ಸರಕಾರವನ್ನು ತರಬೇಕೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಿರುವುದು ಕಂಡು ಬರುತ್ತಿದೆ. ಈ ಅಭಿಪ್ರಾಯದ ಬೆಂಬಲಿಗರು ಸಂಸದೀಯ ಪದ್ಧತಿ ಸರಕಾರ ದಲ್ಲಿ ಕಂಡು ಬಂದ ಸೋಲು ಮತ್ತು ಕೊರತೆಯನ್ನು ಎತ್ತಿ ತೋರಿಸಿದ್ದಾರೆ. ಸಂವಿಧಾನಕ್ಕೆ ತರುವ ಯಾವುದೇ ತಿದ್ದುಪಾಟು ಮತ್ತು ಇಂತಹ ತಿದ್ದುಪಾಟುಗಳಿಂದ ಯಾವುದೇ ರೀತಿಯ ಸಂವಿಧಾನಾತ್ಮಕ ಸಮಸ್ಯೆಗಳು ಉದ್ಭವಿಸುವುದು ಅನಿವಾರ್ಯ. ಆದ್ದರಿಂದ ಇಂಥ ಮಾರ್ಪಾಟನ್ನು ಅತಿ ದೀರ್ಘಾಲೋಚನೆಯ ನಂತರ ಸ್ವಾಗತಿಸ ಬೇಕಾಗುತ್ತದೆ.

ಸಂವಿಧಾನ ಎಂದರೆ ಒಂದು ರಾಷ್ಟ್ರಕ್ಕೆ ಸಂಬಂಧಿಸಿದ ಮೂಲ ಕಾಯ್ದೆ. ಅದು ಒಂದು ಜೀವಂತ ವಸ್ತು. ಅದು ಒಂದು ಅಥವಾ ಎರಡು ತಲೆಮಾರಿಗೆ ಸಂಬಂಧಿಸಿ ದುದಷ್ಟೇ ಅಲ್ಲ; ಬರಲಿರುವ ಹಲವಾರು ತಲೆಮಾರುಗಳಿಗೂ ಸಂಬಂಧಿಸಿದುದೇ ಆಗಿರುತ್ತದೆ. ಸಂವಿಧಾನದ ರಚನೆಗೆ ಶ್ರೇಷ್ಟಮಟ್ಟದ ರಾಜಕೀಯ ಶಾಸ್ತ್ರದ ಕೌಶಲ್ಯತೆ ಅಗತ್ಯವಾಗಿರುತ್ತದೆ. ಈ ಸಂವಿಧಾನ ರಚಿಸುವ ಜವಾಬ್ದಾರಿಯನ್ನು ಯಾರಿಗೆ ವಹಿಸಲಾಗಿರುತ್ತದೆಯೋ ಅವರುಗಳು ಸರಕಾರದ ಅಗತ್ಯತೆಗಳನ್ನು ನೋಡಿ ಕೊಳ್ಳಬೇಕು ಮತ್ತು ಅದೇ ಸಮಯಕ್ಕೆ ಯಾವ ಆದರ್ಶಗಳು ಉತ್ತಮ ರಾಷ್ಟ್ರ ರಚನೆಗೆ ಸ್ಫೂರ್ತಿ ನೀಡಿರುತ್ತವೆಯೋ ಆ ಆದರ್ಶಗಳನ್ನು ಕಾಪಾಡಿಕೊಂಡು ಬರಬೇಕಾ ಗಿರುತ್ತದೆ. ಒಂದು ರಾಷ್ಟ್ರದ ಇತಿಹಾಸದಲ್ಲಿ ಯಾವುದೇ ಒಂದು ತಲೆಮಾರಿನವರು ಸಂವಿಧಾನವನ್ನು ರಚಿಸಲು ಪ್ರಯತ್ನಿಸಿದ್ದೇ ಆದರೆ ಅದೊಂದು ಅತ್ಯುನ್ನತ ಸಾಂದರ್ಭಿಕ ಕ್ರಿಯೆಯಾಗಿರುತ್ತದೆ ಎಂದು ಹೇಳಬೇಕಾಗುತ್ತದೆ. ಇಂಥ ಸಂದರ್ಭಗಳು ಸಾಮಾನ್ಯ ವಾಗಿ ಬರುವುದಿಲ್ಲ. ಆದ್ದರಿಂದ ಸಂವಿಧಾನವನ್ನು ರಚಿಸುವ ಅವಕಾಶವನ್ನು ಯಾರಿಗೆ ವಹಿಸಿದರೂ ಅವರುಗಳಿಗೆ ತಮ್ಮ ಮತ್ತು ತಮಗೆ ವಹಿಸಿರುವ ಪಾತ್ರದ ಬಗ್ಗೆ ಖಚಿತವಾದ ತಿಳುವಳಿಕೆ ಇರಬೇಕಾಗುತ್ತದೆ. ನಾಳಿನ ತಲೆಮಾರಿನವರಾದ ಗಂಡು

ಹೆಣ್ಣು ಮಕ್ಕಳುಗಳ ಬದುಕಿನ ಬಗ್ಗೆ ಮಾರ್ಗ ಮತ್ತು ಅವರುಗಳ ಸುಖ ಸಂತೋಷದ ಕಲ್ಪನೆಯನ್ನು ಮೊದಲಿಗೆ ಈಚಿನ ಧುರೀಣರು ತಮ್ಮ ಬುದ್ಧಿಶಕ್ತಿ. ಪ್ರತಿಭೆ, ಭಾವನೆಗಳನ್ನು ಅರ್ಥ ಮಾಡಿಕೊಳ್ಳಬೇಕು. ಅಂಥವರ ದೀರ್ಘಾಲೋಚನೆಯ ಮೇಲೆ ಸಾಷ್ಟ್ರದ ಆಡಳಿತ ಶಾಸ್ತ್ರದ ಕಲ್ಪನೆ ಅವಲಂಬಿಸಿರುತ್ತದೆ.

ಭಾರತದ ಸಂವಿಧಾನವನ್ನು ರಚಿಸಲು ಯಾರಿಗೆ ವಹಿಸಲಾಗಿತ್ತೋ ಅವರುಗಳು ತಮ್ಮ ಐತಿಹಾಸಿಕ ಪಾತ್ರದ ಅರ್ಹತೆಯನ್ನು ಮತ್ತು ತಮಗೆ ವಹಿಸಿದ ಕರ್ತವ್ಯದ ವ್ಯಾಪ್ತಿ ಮತ್ತು ಮಹತ್ವಗಳನ್ನು ಅರಿತವರಾಗಿದ್ದರು. ರಾಜಕೀಯತೆ ಯಾವ ಮೌಲ್ಯಗಳಿಗೆ ಬದ್ಧವಾತ್ತೋ ಯಾವ ಆದರ್ಶಗಳಿಗೆ ಅಧೀನವಾಗಿತ್ತೋ ಮತ್ತು ಆಡಳಿತದ ಉಳಿವಿಗಾಗಿ ಅಗತ್ಯ ಕಂಡು ಬಂದಲ್ಲಿ ಕಷ್ಟಗಳನ್ನು ಅನುಭವಿಸಲು ಸಿದ್ಧ ವಾಗಿತ್ತೋ ಅಂತಹ ಶ್ರೇಷ್ಠ ಪ್ರತಿಭಾವಂತರ ರಾಜ್ಯಶಾಸ್ತ್ರ ನಿಪುಣರ ಸಮೂಹ ಸಂವಿಧಾನ ರಚನಾ ಸಭೆಯಲ್ಲಿ ಪ್ರತಿನಿಧಿಸಲ್ಪಟ್ಟವರಾಗಿದ್ದರು. ಆದ್ದರಿಂದ ಸರಕಾರದ ಆಡಳಿತ ಪದ್ಧತಿಯನ್ನು ಬದಲಾಯಿಸುವ ಯಾವುದೇ ಕ್ರಮಗಳನ್ನು ತರುವಾಗ ಅದನ್ನು ದೀರ್ಘಾಲೋಚನೆಯ ನಂತರ ಸ್ವೀಕರಿಸಬೇಕು. ದೈನಂದಿನ ವ್ಯವಹಾರಗಳನ್ನು ನಿರ್ವಹಿಸಲು ಸಾಮಾನ್ಯ ಕಾನೂನುಗಳಿರುತ್ತವೆ. ಆದರೆ ಸಂವಿಧಾನ ಭಿನ್ನವಾಗಿರು ತ್ತದೆ. ಸಾಮಾನ್ಯ ಕಾನೂನುಗಳನ್ನು ಸಂಕೀರ್ಣ ಪರಿಸ್ಥಿತಿಗಳಿಗೆ ತಕ್ಕಂತೆ ತಿದ್ದುಪಡಿ ಮಾಡಿಕೊಳ್ಳಬಹುದು. ತೀರ್ಮಾನ ತೆಗೆದುಕೊಳ್ಳಬೇಕಾದ ತಾತ್ಕಾಲಿಕ ಸಮಯಕ್ಕೆ ಸಂಬಂಧಿಸಿದ ನಿಯಮ ನಿಬಂಧನೆಗಳನ್ನು ಸಂವಿಧಾನ ತಿಳಿಸುವುದಿಲ್ಲ. ಆದರೆ ವಿಶಾಲ ಭವಿಷ್ಯತ್ತನ್ನು ರೂಪಿಸಲು ಲಕ್ಷಣ ಮತ್ತು ಆದರ್ಶಗಳನ್ನು ತಿಳಿಸುವುದೇ ಸಂವಿಧಾನದ ಕರ್ತವ್ಯ.

ಸಂವಿಧಾನದಲ್ಲಿ ಪರಿಪೂರ್ಣತೆ ಇದೆ ಎಂದು ಇದರ ಅರ್ಥವಲ್ಲ: ಸಂವಿಧಾನವೂ ಮನುಷ್ಯ ನಿರ್ಮಾಣವಾದದ್ದರಿಂದ ಅದು ಪರಿಪೂರ್ಣವಾಗಲಾರದು. ಮನುಷ್ಯ ನಿರ್ಮಿಸಿದ ನೀತಿ ನಿಯಮಗಳಲ್ಲಿ ತಪ್ಪುಗಳು ಕಂಡುಬರುವಂತೆ ಸಂವಿಧಾನದಲ್ಲೂ ದೋಷಗಳು ಕಂಡುಬರುತ್ತವೆ. ಅದು ತಪ್ಪುಗಳಿಂದ ಸಂಪೂರ್ಣ ಮುಕ್ತ ಎಂದು ಹೇಳಲು ಬರುವುದಿಲ್ಲ. ದೈನಂದಿನ ಕರ್ತವ್ಯಗಳನ್ನು ನಿರ್ವಹಿಸುವ ಸಂದರ್ಭಗಳಲ್ಲಿ ಸಂವಿಧಾನಗಳು ಸಂಕ್ರಮಣ ಕಾಲವನ್ನು ಎದುರಿಸಬೇಕಾಗಿರುತ್ತೆ ಎಂಬ ಅರಿವು ಸಂವಿ ಧಾನದ ರಚನಕಾರರಲ್ಲಿತ್ತು ಎಂದು ಹೇಳಬಹುದು.

(ಮುಂದುವರಿಯುವುದು)

# ಮಹಾ ಕವಿ ಕಾಳಿದಾಸ

(ಮುಂದುವರಿದದ್ದು)

ಟಿ. ಎನ್. ಮುರಳೀಧರ

ಮತ್ತೂ ಕೆಲವರು "ಬಂಗಾಳ"ದಲ್ಲಿ ಕಾಳಿದಾಸನೆಂಬ ಹೆಸರು ಭರತ ಖಂಡದ ಯಾವ ಪ್ರದೇಶದಲ್ಲಿ ಪ್ರಚಾರವಾಗಿಲ್ಲವೆಂದೂ, ಮತ್ತು ಕಾಳಿದಾಸನ ಸಂಸ್ಕೃತಕ್ಕೂ ಮತ್ತು "ಬಂಗಾಳಿ" ಭಾಷೆಗೂ ಹೆಚ್ಚಿನ ಸ್ವಾಮ್ಯ ಇರುವುದರಿಂದ ಇವನನ್ನು ಬಂಗಾಳಿ ದವನೆಂದು ಅಭಿಪ್ರಾಯ ಪಡುತ್ತಾರೆ. ಆದರೆ, ಕಾಳಿದಾಸನು ಯಾವ ಪ್ರದೇಶದವ ನಾಗಿದ್ದರೂ; ಈತನು ನಮ್ಮ ರಾಷ್ಟ್ರದ ಅತಿ ಅಮೂಲ್ಯ "ಕವಿರತ್ನ"ನಾಗಿರುವುದು ನಮ್ಮೆಲ್ಲರ ಭಾಗ್ಯವೆಂದು ನಾವು ತಿಳಿಯೋಣ.

ಸಂಸ್ಕೃತ ವಿಧ್ವಾಂಸರ ಶೋಧನೆಯ ಪರವಾಗಿ -- ಕಾಳಿದಾಸನು ರಚಿಸಿದನೆಂದು ಹೇಳಲಾಗುವ ಕೃತಿಗಳು ಏಳು ಮಾತ್ರ – "ಋತು ಸಂಹಾರ", "ಮೇಘ ಸಂದೇಶ" ಗಳೆಂಬ 2 ಖಂಡ ಕಾವ್ಯಗಳು, "ಮಾಲವಿಕಾಗ್ನಿ ಮಿತ್ರ", "ವಿಕ್ರಮೋರ್ವಶೀಯಾ" ಮತ್ತು "ಅಭಿಜ್ಞಾನ ಶಾಕುಂತಲ" ಗಳೆಂಬ ಮೂರು ನಾಟಕಗಳು ಮತ್ತು "ಕಮಾರ ಸಂಭವ" ಮತ್ತು "ರಘು ವಂಶ"ಗಳೆಂಬ 2 ಮಹಾ ಕಾವ್ಯಗಳು.

"ಅಭಿಜ್ಞಾನ ಶಾಕುಂತಲ"ವನ್ನು ಕಾಳಿದಾಸನ ಸರ್ವಸ್ವವೆನ್ನಬಹುದು. ಈತನ ಇತರ ಕೃತಿಗಳು ನಷ್ಟವಾಗಿದ್ದರೂ ಇದೊಂದೇ ಇವನನ್ನು "ಕವಿ ಶಿರೋಮಣಿ" ಪಂಕ್ತಿ ಗೇರಿಸಲಿಕ್ಕೆ ಸಾಕು. ಆದುದರಿಂದಲೇ

" ಕಾವ್ಯೇಷು ನಾಟಕಂ ರಮ್ಯಂ, ತತ್ರ ರಮ್ಯ ಶಕುಂತಲಾ ।
ತತ್ರಾಪಿ ಚ ಚತುರ್ಥೋಽಂಕಃ ತತ್ರ ಶ್ಲೋಕ ಚತುಷ್ಟಯಂ ॥ "

"ಎಲ್ಲಾ ಪ್ರಕಾರದ ಕಾವ್ಯಗಳಲ್ಲಿ ನಾಟಕವು ರಮಣೀಯವಾದುದು. ಅವರಲ್ಲೂ "ಅಭಿಜ್ಞಾನ ಶಾಕುಂತಲ"ವು ಹೆಚ್ಚು ರಮಣೀಯವಾದುದು. ಅದರಲ್ಲೂ ನಾಲ್ಕನೆಯ ಅಂಕವು ಬಹಳ ಹೃದಯ ಸ್ಪರ್ಶಿಯಾಗಿದ್ದು ಶ್ರೇಷ್ಠವಾಗಿದೆ.

(ಮುಂದುವರಿಯುತ್ತದೆ)

# ನೊಬೆಲ್ ಪ್ರಶಸ್ತಿ ವಿಜೇತರು

## ವೈದ್ಯಕೀಯ ಶಾಸ್ತ್ರ ಮತ್ತು ಶರೀರ ಶಾಸ್ತ್ರ

[ಮುಂದುವರಿದಿದೆ]

| | | |
|---|---|---|
| 1907 | ಫ್ರಾನ್ಸ್ | ಸಿ. ಎಲ್. ಎ. ಲಾವ್ರೆನ್ |
| 1908 | ಜರ್ಮನಿ | ಪೌಲ್ ಎರ್ಲಿಜ್ ಮತ್ತು |
| | ಫ್ರಾನ್ಸ್ | ಮೆಚ್ನಿಕಾಫ್ |
| 1909 | ಸ್ವೀಡನ್ | ಟಿ. ಕೋಚರ್ |
| 1910 | ಜರ್ಮನಿ | ಎ. ಕೋಸೆಲ್ |
| 1911 | ಸ್ವೀಡನ್ | ಎ. ಗಲ್‌ಸ್ಟ್ರಾಂಡ್ |
| 1912 | ಅಮೇರಿಕಾ | ಅಲೆಕ್ಸೀಸ್ ಕ್ಯಾರೆಲ್ |
| 1913 | ಫ್ರಾನ್ಸ್ | ಚಾರ್ಲ್ಸ್ ರಿಚೆಟ್ |
| 1914 | ಆಸ್ಟ್ರಿಯಾ | ಆರ್. ಬರಾನಿ |
| 1915ರಿಂದ 1918ರವರೆಗೆ ಪ್ರಶಸ್ತಿ ನೀಡಲಾಗಿಲ್ಲ. | | |
| 1919 | ಬೆಲ್ಜಿಯಂ | ಡಾ|| ಜೆ. ಬಾರ್ಡೆಟ್ |
| 1920 | ಡೆನ್ಮಾರ್ಕ್ | ಆಗಸ್ಟ್‌ರೋನ್ |
| 1921 | ಪ್ರಶಸ್ತಿ ನೀಡಲಾಗಿಲ್ಲ. | |
| 1922 | ಇಂಗ್ಲೆಂಡ್ | ಎ. ವಿ. ಹಿಲ್ ಮತ್ತು |
| | ಜರ್ಮನಿ | ಓಟ್ಟೋ ಮೆಯರೋಫ್ |
| 1923 | ಕೆನಡಾ | ಫೆಡ್ರಿಕ್ ಜಿ. ಬ್ಯಾನ್‌ಟಿಂಗ್ ಮತ್ತು ಜೆ. ಜೆ. ಆರ್. ಮ್ಯಾಕಲಿಯಾಡ್ |
| 1924 | ಹಾಲೆಂಡ್ | ಡಬ್ಲ್ಯು. ಇಂಥೋವೆನ್ |
| 1925 | ಪ್ರಶಸ್ತಿ ನೀಡಲಾಗಿಲ್ಲ. | |

[ಮುಂದುವರೆಯುವುದು]

# ಏಕೀಕೃತ ಕರ್ನಾಟಕ-ಒಂದು ಸಮೀಕ್ಷೆ

ಡಾ॥ ಸೂರ್ಯನಾಥ ಯು. ಕಾಮತ್

ಇಸವಿ 1956ರ ನವಂಬರ್ ಒಂದನೆಯ ತಾರೀಕು ಕರ್ನಾಟಕವು ಏಕೀಕೃತವಾಗಿ ನವ ಮೈಸೂರು ರಾಜ್ಯದ ಉದಯವಾಯಿತು. ದಶಕಗಳ ಕಾಲದ ಏಕೀಕರಣ ಚಳವಳಿಯ ನಂತರ ಈ ಕನಸು ನನಸಾಗಿತ್ತು. "ಸುಮಾರು ಎರಡು ಕೋಟಿ ಕನ್ನಡಿಗರು ಒಟ್ಟಿಗೆ—ಅನೇಕಕಾಲ ಆಗಲಿದ್ದ ನಂತರ—ಸೇರುತ್ತೇವೆಂಬ ಯೋಚನೆಯೇ ರೋಮಾಂಚಕಾರಿಯಾಗಿದೆ. ನಮ್ಮ ಬಾಳಿನಲ್ಲಿ ಇದಕ್ಕಿಂತ ಚರಿತ್ರಾರ್ಹ ಸಂಗತಿಯೇ ಇರಲಾರದು. ನೂರು ಇನ್ನೂರು ಮುನ್ನೂರು ವರ್ಷಗಳ ಕೆಳಗೆ ಬೇರೆ ಬೇರೆ ಹದಿನೆಂಟು ಇಪ್ಪತ್ತು ಸರ್ಕಾರಗಳಿಗೆ ಹಂಚಿಹೋಗಿ ಅಣ್ಣ ತಮ್ಮಂದಿರನ್ನೇ ಗುರುತಿಸಲಾರದೆ ಕಂಗಾಲಾಗಿ ಕಂಗೆಟ್ಟಿದ್ದ ನಮ್ಮನ್ನು ಮತ್ತೆ ನಮ್ಮ ಪ್ರಿಯಬಂಧುಗಳೊಡನೆ ಸೇರಿಸಿದ ನಮ್ಮ ಸಂವಿಧಾನಕ್ಕೆ ನಾವು ಎಷ್ಟು ಕೃತಜ್ಞರಾಗಿದ್ದರೂ ಅಲ್ಪವೇ? ಎಂದು ನಾಡಿನ ಗಣ್ಯ ಸಾಹಿತಿಗಳೊಬ್ಬರು ಅಂದಿನ ಕನ್ನಡಿಗರ ಮನಸ್ಥಿತಿಯನ್ನು ಬಣ್ಣಿಸಿದ್ದಾರೆ.

ಒಂದಾದ ಈ ಕನ್ನಡ ನಾಡಿನ ರಾಜ್ಯಪಾಲರಾಗಿ ಮೈಸೂರಿನ ಮಾಜಿ ಮಹಾರಾಜ ಜಯಚಾಮರಾಜ ಒಡೆಯರೂ ಮುಖ್ಯ ಮಂತ್ರಿಗಳಾಗಿ ಗಣ್ಯ ಸ್ವಾತಂತ್ರ್ಯ ಯೋಧ ಎಸ್. ನಿಜಲಿಂಗಪ್ಪನವರೂ ಅಧಿಕಾರ ವಹಿಸಿಗೊಂಡರು. ಹೊಸ ರಾಜ್ಯದ ವಿಧಾನ ಸಭೆಯಲ್ಲಿ 210 ಸದಸ್ಯರೂ ವಿಧಾನ ಪರಿಷತ್ತಿನಲ್ಲಿ 63 ಸದಸ್ಯರೂ ಇದ್ದರು 1952ರಲ್ಲಿ ನಡೆದಿದ್ದ ಮಹಾ ಚುನಾವಣೆಯ ಕಾಲಕ್ಕೆ ಮದ್ರಾಸು, ಮುಂಬೈ ಹಾಗೂ ಹೈದರಾಬಾದ್ ಪ್ರಾಂತಗಳ ಕನ್ನಡ ಪ್ರದೇಶಗಳ ವಿಧಾನ ಸಭೆ ಮತ್ತು ವಿಧಾನ ಪರಿಷತ್ತಿನ ಸದಸ್ಯರು ಹೊಸ ವಿಧಾನ ಮಂಡಲದಲ್ಲಿ ಹಳೆಯ ಮೈಸೂರಿನ ಸದಸ್ಯ ಜೊತೆ ಸ್ಥಾನಾಪನ್ನರಾದರು. ಮುಂದೆ 1957ರಲ್ಲಿ ಮಹಾಚುನಾವಣೆ ನಡೆದಾ ವಿಧಾನ ಸಭೆಯಲ್ಲಿ ಕಾಂಗ್ರೆಸ್ಸು 151 ಸ್ಥಾನಗಳನ್ನು ಪಡೆಯಿತು. ಅದ ಪಡೆದ ಮತಗಳು ಶೇ. 52.08. ಒಟ್ಟು 19 ಸ್ಥಾನಗಳನ್ನೂ ಶೇ. 14.5 ಮ ಗಳನ್ನೂ ಪಡೆದ ಪ್ರಜ್ಞಾಸಮಾಜವಾದಿ ಪಕ್ಷವು ಪ್ರಮುಖ ವಿರೋಧ ಪಕ್ಷವಾಗಿತ್ತು ಎಸ್. ನಿಜಲಿಂಗಪ್ಪನವರೆ ಮತ್ತೆ ಮುಖ್ಯಮಂತ್ರಿಯಾಗಿ ಆಯ್ಕೆಗೊಂಡರು. ಆದ ಕಾಂಗ್ರೆಸ್ ಪಕ್ಷದೊಳಗಿನ ಒಳಜಗಳಗಳ ಪರಿಣಾಮವಾಗಿ ಅವರು 1958ರ ಮೆ ತಿಂಗಳಲ್ಲಿ ತಮ್ಮ ಸ್ಥಾನವನ್ನು ಅವರು ಬಿ.ಡಿ. ಜತ್ತಿ ಅವರಿಗೆ ಬಿಟ್ಟುಕೊಡಬೇಕಾಯಿತು

ನಿಜಲಿಂಗಪ್ಪನವರು ಮುಖ್ಯಮಂತ್ರಿಯಾಗಿದ್ದ ಈ ಮೊದಲ ಅವಧಿ (1956–58) ಯಲ್ಲಿ ಆದ ಮುಖ್ಯ ಸಾಧನೆಗಳ ಪೈಕಿ ಉಲ್ಲೇಖನೀಯವಾದುದು. 1957ರಲ್ಲಿ ಬಿ. ಡಿ. ಜತ್ತಿಯವರು ಅಧ್ಯಕ್ಷರಾಗಿರುವ ಭೂಸುಧಾರಣಾ ಮಂಡಳಿಯ ರಚನೆ. ಇದಲ್ಲದೆ 1955ರಲ್ಲಿ ನೇಮಿಸಿದ್ದ ಮಸ್ಕರ್ಣ್ಹಿಂ ವೇತನ ಆಯೋಗದ ವರದಿಯನ್ನು ಅವರು ಕಾರ್ಯಾಚರಣೆಗೆ ತಂದರು. ಕರ್ನಾಟಕದ ವಿದ್ಯುತ್ ಮಂಡಳಿಯ ಸ್ಥಾಪನೆ ಅವರ ಇನ್ನೊಂದು ಗಣ್ಯ ಕಾರ್ಯ. ತುಂಗಭದ್ರಾ ಉನ್ನತ ಮಟ್ಟದ ಕಾಲುವೆ ಯೋಜನೆ (ಮೊದಲ ಹಂತ), ಘಟಪ್ರಭಾ ಯೋಜನೆಯ ಎರಡನೆಯ ಹಂತ, ಕಬಿನಿ ಜಲಾಶಯ ಯೋಜನೆ, ಮುಂತಾದ ಗಣ್ಯ ನೀರಾವರಿ ಕಾರ್ಯಗಳು ಎರಡನೆಯ ಪಂಚವಾರ್ಷಿಕ ಯೋಜನೆಯ ಅಂಗವಾಗಿ ಆಗ ಆರಂಭಿಸಲ್ಪಟ್ಟವು. ದಾಂಡೇಲಿಯಲ್ಲಿ ಖಾಸಗಿ ಬಂಡವಾಳದ ಕಾಗದ ಕಾರ್ಖಾನೆಯು ಶುರುವಾಯಿತು [1958] ಎ.ಡಿ. ಗೋರ್‍ವಾಲಾರ ನೇತೃತ್ವದಲ್ಲಿ ಆಡಳಿತ ಸುಧಾರಣಾ ಆಯೋಗವು ಸ್ಥಾಪನೆಗೊಂಡಿತು. 1957ರ ನಂತರ ವಿಧಾನ ಸಭೆಯಲ್ಲಿ ಕೆ. ಕೆಂಚಪ್ಪ ವಿರೋಧ ಪಕ್ಷದ ನಾಯಕರಾಗಿದ್ದರು.

ಜತ್ತಿಯವರ ಆಡಳಿತ ಕಾಲದಲ್ಲಿ ಶರಾವತಿ ಜಲವಿದ್ಯುತ್ ಯೋಜನೆಯನ್ನು ಅಮೆರಿಕದ ನೆರವಿನಿಂದ ಅಂತಿಮ ರೂಪಕ್ಕೆ ತರಲಾಯಿತು. ಜಿಲ್ಲಾ ಬೋರ್ಡ್‌ಗಳನ್ನು ರದ್ದುಗೊಳಿಸಿ ತಾಲ್ಲೂಕು ಅಭಿವೃದ್ಧಿ ಮಂಡಳಿಗಳನ್ನು 1959ರಲಿ ಸ್ಥಾಪಿಸಲಾಯಿತು. ಇದೇ ಕಾನೂನಿನಂತೆ 1,500ಕ್ಕಿಂತ ಹೆಚ್ಚು ಮತ್ತು 10,000ಕ್ಕಿಂತ ಕಡಿಮೆ ಜನಸಂಖ್ಯೆಯುಳ್ಳ ಕಂದಾಯದ ಗ್ರಾಮ ಅಥವಾ ಗ್ರಾಮಗಳ ಗುಂಪುಗಳಲ್ಲಿ ಪಂಚಾಯತ್ ಬೋರ್ಡ್‌ಗಳನ್ನು ಸ್ಥಾಪಿಸಲಾಯಿತು. ಭೂಸುಧಾರಣಾ ಕಾನೂನನ್ನು ಇವರ ಕಾಲದಲ್ಲೇ ಸಿದ್ಧಪಡಿಸಿದರೂ ಅದು 1962ರಲ್ಲಿ ಮಂಜೂರಾಗಿ 1965ರಲ್ಲಿ ಕಾರ್ಯಾಚರಣೆಗೆ ಬಂತು. 1961ರಲ್ಲಿ ಮಂಜೂರಾದ ಕಡ್ಡಾಯ ಶಿಕ್ಷಣ ಮಸೂದೆಯಂತೆ ಆರರಿಂದ ಹನ್ನೊಂದು ವರ್ಷಗಳ ನಡುವಣ ಮಕ್ಕಳನ್ನು ಶಾಲೆಗೆ ಕಳುಹಿಸಬೇಕೆಂದು ಕಡ್ಡಾಯ ಮಾಡಲಾಯಿತು. ವಾರ್ಷಿಕ ಆದಾಯ ರೂ. 1200ಕ್ಕೆ ಕಡಿಮೆ ಇರುವ ದಂಪತಿಗಳ ಮಕ್ಕಳಿಗೆ ಹೈಸ್ಕೂಲಿನವರೆಗೆ ಶಿಕ್ಷಣವನ್ನು ಉಚಿತವಾಗಿ ಕೊಡಲಾಯಿತು. ಆಂಧ್ರ ಪ್ರದೇಶದ ಸರಕಾರದ ಜೊತೆ ಪಾಲುಗಾರಿಕೆಯಲ್ಲಿ ತುಂಗಭದ್ರಾ ಉಕ್ಕಿನ ಕಾರ್ಖಾನೆಯನ್ನು ಹೊಸಪೇಟೆಯಲ್ಲಿ ಸ್ಥಾಪಿಸಲಾಯಿತು [1960]. ಕೈಗಾರಿಕೆಗಳನ್ನು ವಿಶೇಷತಃ ಸಣ್ಣಪ್ರಮಾಣದ ಕೈಗಾರಿಕೆಗಳನ್ನು ಪ್ರೋತ್ಸಾಹಿಸಲು ಜತ್ತಿಯವರು ಅನೇಕ ಕ್ರಮಗಳನ್ನು ಕೈಗೊಂಡರು,

ನೌಕರಿ ಮತ್ತು ಶಿಕ್ಷಣ ಕ್ಷೇತ್ರದಲ್ಲಿ ಸ್ಥಾನ ಕಾದಿರಿಸುವ ಬೇಡಿಕೆಯನ್ನು ಗಮನಿಸಲು ಜತ್ತಿ ಸರಕಾರವು ನೇಮಿಸಿದ್ದ ಡಾ॥ ಆರ್. ನಾಗನಗೌಡ ಸಮಿತಿಯ ವರದಿಯನ್ನು ರಾಜ್ಯ ಶ್ರೇಷ್ಠ ನ್ಯಾಯಾಲಯವು ಸಂವಿಧಾನಬಾಹಿರವೆಂದು ತಳ್ಳಿಹಾಕಿತು.

ನಿಜಲಿಂಗಪ್ಪ ಮತ್ತು ಜತ್ತಿಯವರ ಆಡಳಿತಗಳ ಬಹುಭಾಗವು ಏಕೀಕೃತ ಕರ್ನಾಟಕದ ಹಿಂದಣ ಐದು ಭಾಗಗಳಲ್ಲಿದ್ದ ವಿವಿಧ ಕಾನೂನುಗಳ ಸ್ಥಾನದಲ್ಲಿ ಇಡೀ ಕರ್ನಾಟಕಕ್ಕೆ ಸಾಮಾನ್ಯವಾಗಿ ಇರಬೇಕಾದಂತ ಹೊಸ ಕಾನೂನುಗಳನ್ನು ಸಿದ್ಧಪಡಿಸಿ ಮಂಜೂರು ಮಾಡಿಕೊಳ್ಳುವ ಕಾರ್ಯದಲ್ಲಿ ವ್ಯಯವಾಯಿತು. ಇಡೀ ರಾಜ್ಯದಲ್ಲಿ ಒಂದೇ ವಿವಿಧ ನಿಯಮಾವಳಿಗಳು ಜಾರಿಯಲ್ಲಿರುವಂತೆ ಮಾಡಲು ಅವಶ್ಯವಾಗಿತ್ತು.

1962ರ ಮಹಾ ಚುನಾವಣೆಯ ನಂತರ ಸುಮಾರು ಮೂರುವರೆ ತಿಂಗಳ ಕಾಲ ಎಸ್. ಆರ್. ಕಂಠಿಯವರು ರಾಜ್ಯದ ಮುಖ್ಯಮಂತ್ರಿಯಾಗಿದ್ದರು (ಮಾರ್ಚ್ 9 ರಿಂದ ಜೂನ್ 21) ವಿಧಾನ ಸಭಾ ಚುನಾವಣೆಯಲ್ಲಿ ನಿಜಲಿಂಗಪ್ಪನವರು ಸೋತು ದರಿಂದ (ಕಾಂಗ್ರೆಸ್ಸಿನಲ್ಲಿ ಆಗ ನಿಜಲಿಂಗಪ್ಪನವರ ಗುಂಪಿನ ಮೇಲ್ಮೈ ಆಗಿ ಅವರೇ ಮುಖ್ಯಮಂತ್ರಿಯಾಗುವರೆಂಬ ನಿರೀಕ್ಷೆಯಿತ್ತು), 'ರಾಮನು ವನವಾಸದಿಂದ ಮರಳುವ ತನಕ' ತಾನು ಭರತನಾಗಿ ಆಡಳಿತ ನಿರ್ವಹಿಸುವುದಾಗಿ ಕಂಠಿ ಹೇಳಿಕೊಂಡಿದ್ದರು. ಮುಂದೆ ಜೂನ್‌ನಲ್ಲಿ ಮುಖ್ಯಮಂತ್ರಿಗಳಾದ ನಿಜಲಿಂಗಪ್ಪನವರು 1968ರ ಮೇ ತಿಂಗಳವರೆಗೆ ಅಧಿಕಾರದಲ್ಲಿದ್ದರು. 1967ರ ಡಿಸೆಂಬರ್‌ನಲ್ಲಿ ನಿಜಲಿಂಗಪ್ಪನವರು ಅಖಿಲ ಭಾರತ ಕಾಂಗ್ರೆಸ್ಸಿನ ಅಧ್ಯಕ್ಷರಾಗಿ ಆಯ್ಕೆಗೊಂಡರೂ ಮುಂದೆ ಆರು ತಿಂಗಳ ಕಾಲ ಮುಖ್ಯಮಂತ್ರಿಯಾಗಿ ಮುಂದುವರಿದರು. (ಅವರು ಮಂತ್ರಿಪದ ತ್ಯಜಿಸುವ ಬಗ್ಗೆ ಹಾಗೂ ಮುಂದಿನ ಉತ್ತರಾಧಿಕಾರಿಯ ಬಗ್ಗೆ ಊಹಾಪೋಹಗಳು ನಡೆದಿರಲು 'ಭರತನಿಗೆ ಅವಕಾಶವಿದೆಯೇ?' ಎಂಬ ಪ್ರಶ್ನೆಯನ್ನು ಕಂಠಿಯವರಿಗೆ ಕೇಳಲಾಗಿ 'ಇಲ್ಲ, ಈಗ ಲವ-ಕುಶರ ಪ್ರಭಾವ ಹೆಚ್ಚಿದಂತಿದೆ', ಎಂದು ಅವರು ಉತ್ತರಿಸಿದ್ದರು. ಹೀಗೆ ಉಲ್ಲೇಖಿತರಾದ ಲವಕುಶರು ನಿಜಲಿಂಗಪ್ಪನವರ ಸಂಪುಟದಲ್ಲಿ ಇದ್ದ ವೀರೇಂದ್ರ ಪಾಟೀಲ ಹಾಗೂ ರಾಮಕೃಷ್ಣ ಹೆಗಡೆ).

ನಿಜಲಿಂಗಪ್ಪನವರ ಈ ಎರಡನೆಯ ಅವಧಿಯು ಅನೇಕ ದೂರಗಾಮಿಯೋಜನೆಗಳಿಂದಾಗಿ ಸ್ಮರಣೀಯವಾಗಿದೆ. ಮಂಗಳೂರು ಬಂದರು ಯೋಜನೆ ಹಾಗೂ ಹಾಸನ-ಮಂಗಳೂರು ರೈಲು ಮಾರ್ಗಗಳನ್ನು ಇದೇ ಕಾಲದಲ್ಲಿ ಕೇಂದ್ರ ಸರಕಾರವು ಮಂಜೂರು ಮಾಡಿತು. ಅವರು ಪಾನ ನಿಷೇಧವನ್ನು ಸಡಿಲಗೊಳಿಸಿ, 1968ರಲ್ಲಿ ಹೆಚ್ಚುಕಡಿಮೆ ಪೂರ್ತಿಯಾಗಿ ಅದನ್ನು ಕಿತ್ತುಹಾಕ್ಕಿದರು ರಾಜ್ಯ ಬೊಕ್ಕಸಕ್ಕೆ ಇದರಿಂದ ಉತ್ಪನ್ನ ಹೆಚ್ಚಿದ್ದರ ಜೊತೆ ರಾಜ್ಯದ ರಾಜಕಾರಣದಲ್ಲಿ ಶ್ರೀಮಂತ ಅಬಕಾರಿ ಗುತ್ತೇದಾರರ ಪ್ರಭಾವ ಹೆಚ್ಚಲು ಮುಂದೆ ದಾರಿಯಾಯಿತು. ಕೃಷಿ-ವಿಶ್ವವಿದ್ಯಾಲಯ (1963) ಮತ್ತು ಬೆಂಗಳೂರು ವಿಶ್ವವಿದ್ಯಾಲಯಗಳ ಸ್ಥಾಪನೆ ಆಯಿತು. (1964). ಬೆಂಗಳೂರು ನಗರಕ್ಕೆ ಕಾವೇರಿಯಿಂದ ಕುಡಿಯುವ ನೀರು ಒದಗಿಸುವ ಯೋಜನೆ ಈ ಕಾಲದಲ್ಲಿ ಅಂತಿಮ ರೂಪ ಕಂಡಿತು. ಅನೇಕ ನೀರಾವರಿ ಯೋಜನೆಗಳನ್ನು (ನಾಲ್ಕು ದೊಡ್ಡ ಹಾಗೂ ಐದು ಸಣ್ಣ ಪ್ರಮಾಣದವು) ಮೂರನೆಯ ಯೋಜನೆಯಂತೆ

ರಾಜ್ಯದಲ್ಲಿ ಕೈಗೊಳ್ಳಲಾಗಿದ್ದು ರಾಜ್ಯದಲ್ಲಿ ನಿರಾವರಿ ಭೂಮಿ 1956ರಲ್ಲಿ ಶೇಕಡ 7 ಇದ್ದುದು 1968ರಲ್ಲಿ ಶೇಕಡ 10ಕ್ಕೆ ಏರಿತು. ಆದರೆ ಈ ಕಾಲದಲ್ಲಿ ಸರಕಾರೀ ನೌಕರರ ಉಗ್ರ ಚಳವಳಿ ನಡೆಯಿತು. ಮುಂದೆ ನ್ಯಾಯಮೂರ್ತಿ ತುಕೋಳ್ ವೇತನ ಆಯೋಗದ ನೇಮಕವಾಯಿತು. ಅಲ್ಲದೆ 1968ರ ಜನವರಿ ಫೆಬ್ರವರಿ ತಿಂಗಳು ಗಳಲ್ಲಿ ಉಗ್ರಹಿಂದೀ ವಿರೋಧೀ ಚಳುವಳಿ ನಡೆದು ಬೆಂಗಳೂರು, ಮೈಸೂರುಗಳಲ್ಲಿ ಕಾಲೇಜುಗಳನ್ನು ಹಲವು ಬಾರಿ ಮುಚ್ಚಬೇಕಾಗಿ ಬಂತಲ್ಲದೆ ಬೆಂಗಳೂರಲ್ಲಿ ಗೋಲೀ ಬಾರಾಗಿ ಐವರೂ ಮೈಸೂರಲ್ಲಿ ಒಬ್ಬರು ಸತ್ತರು. ಮಹಾರಾಷ್ಟ್ರ-ಕರ್ನಾಟಕ ಗಡಿವಿವಾದ ಉಲ್ಬಣಿಸಿ, ಕರ್ನಾಟಕ ಸರಕಾರದ ವಿರೋಧವನ್ನು ಗಣಿಸದೆ ಕೇಂದ್ರವು 1966ರ ಅಕ್ಟೋಬರ್‌ನಲ್ಲಿ ಮಹಾಜನ್ ಆಯೋಗವನ್ನು ನೇಮಿಸಿತು. ಮುಂದೆ 1967ರಲ್ಲಿ ಅದರ ವರದಿ ಬಂದಾಗ ಕರ್ನಾಟಕಕ್ಕೆ ಅದು ಅನುಕೂಲಕರವಲ್ಲ ವಾದರೂ ಕರ್ನಾಟಕವು ಅದನ್ನು ಒಪ್ಪಿಕೊಂಡರೂ ಅದರ ನೇಮಕಕ್ಕೆ ಒತ್ತಾಯ ಮಾಡಿದ ಮಹಾರಾಷ್ಟ್ರ ಸರಕಾರವೇ ಅದನ್ನು ತಿರಸ್ಕರಿಸಿತು.

1962ರ ಚುನಾವಣೆಯಲ್ಲಿ ಕಾಂಗ್ರೆಸ್ಸು ಹಿಂದಿನ 151ಕ್ಕೆ ಬದಲಾಗಿ 138 ಸ್ಥಾನಗಳನ್ನು ಗೆದ್ದಿತು. ಇಪ್ಪತ್ತು ಸ್ಥಾನಗಳನ್ನು ಗೆದ್ದ ಪ್ರಜಾ ಸಮಾಜವಾದಿ ಪಕ್ಷ ಪ್ರಮುಖ ವಿರೋಧ ಪಕ್ಷವಾಗಿ ಎಸ್. ಶಿವಪ್ಪನವರು ವಿರೋಧ ಪಕ್ಷದ ನಾಯಕರಾದರು. ನಿಜಲಿಂಗಪ್ಪ ಸಂಪುಟದ ಬಗ್ಗೆ ತೀವ್ರ ಭ್ರಷ್ಟಾಚಾರದ ಆಪಾದನೆಗಳನ್ನು ಮಾಡಲಾಯಿತು. ಈ ಪೈಕಿ ಶರಾವತಿ ವಿದ್ಯುದಾಗಾರ ಕಾಮಗಾರಿಯಲ್ಲಿ ಆಯಿತೆನ್ನಲಾದ ಅಪವ್ಯಯದ ಪ್ರಶ್ನೆ ಮುಖ್ಯವಾಗಿದ್ದು, ಮುಂದೆ ಕೇಂದ್ರ ಸರಕಾರವು ಈ ಬಗ್ಗೆ ವಿಚಾರಣೆ ನಡೆಸಿ ನಿಜಲಿಂಗಪ್ಪನವರನ್ನು ದೋಷ ಮುಕ್ತರೆಂದು ಪ್ರಕಟಿಸಿತು. 1967ರ ಚುನಾವಣೆಗೆ ಮೊದಲು ವಿರೋಧ ಪಕ್ಷಗಳು ಒಂದು ಜಂಟಿರಂಗ ರಚಿಸಲು ಪ್ರಯತ್ನಿಸಿ, ಬಹು ಮಟ್ಟಿಗೆ ಯಶಗೊಂಡರು. ಚುನಾವಣೆಗೆ ಮೊದಲು ಅಸ್ತಿತ್ವಕ್ಕೆ ಬಂದ (ಸಾಹುಕಾರ ಚನ್ನಯ್ಯ ಟಿ. ಸುಬ್ರಮಣ್ಯ, ಆರ್. ಶಾಮಣ್ಣ, ಕೆ. ಎಚ್. ಪಾಟೀಲ್, ಅಣ್ಣಾರಾವ್ ಗಣಮುಖಿ ಮುಂತಾದವರು ನಾಯಕರಾಗಿದ್ದ) ಜನತಾ ಪಕ್ಷವೆಂಬ ಹೊಸ ಪಕ್ಷವು 16 ಸ್ಥಾನಗಳನ್ನೂ, ಸ್ವತಂತ್ರ ಪಕ್ಷವು 16 ಸ್ಥಾನಗಳನ್ನೂ ಪ್ರಜಾಸಮಾಜವಾದಿಗಳು 23 ಸ್ಥಾನಗಳನ್ನೂ ಗೋಪಾಲ ಗೌಡರ ನಾಯಕತ್ವದ ಸಂಯುಕ್ತ ಸಮಾಜವಾದೀ ಪಕ್ಷವು 6 ಸ್ಥಾನಗಳನ್ನೂ ಗೆದ್ದವು. 1952ರಿಂದ ಚುನಾವಣೆಗಳನ್ನು ಸ್ಪರ್ಧಿಸಿ ವಿಫಲವಾಗುತ್ತ ಬಂದ ಜನಸಂಘವು ಮೊದಲಬಾರಿ ವಿಧಾನ ಸಭೆಯಲ್ಲಿ 4 ಸ್ಥಾನಗಳನ್ನು ಗೆದ್ದಿತು. 1956ರಲ್ಲಿ ಸ್ಥಾಪನೆಗೊಂಡು 1957 ಮತ್ತು 1962ರಲ್ಲಿ ನಾಲ್ಕು-ನಾಲ್ಕು ಸ್ಥಾನಗಳನ್ನು ಗೆದ್ದಿದ್ದ ಲೋಕ ಸೇವಕ ಸಂಘವು ಈ ಬಾರಿ ಕೇವಲ ಎರಡು ಸ್ಥಾನಗಳನ್ನು ಗೆದ್ದಿತು. ಉತ್ತರ ಕರ್ನಾಟಕದಲ್ಲಿ ಪ್ರಬಲವಾಗಿದ್ದ ಈ ಪಕ್ಷ ದಿಂದ 1967ರಲ್ಲಿ ಚುನಾಯಿತರಾದವರಲ್ಲಿ ಎಸ್. ಆರ್. ಬೊಮ್ಮಾಯಿ ಒಬ್ಬರು.

[ಮುಂದುವರೆಯುವುದು]

## ಅತಿ ಭೇದಿಯಾದಾಗ ದೇಹದಲ್ಲಿ ನೀರಿನ ಅಂಶ ಕಡಿಮೆಯಾಗುತ್ತದೆ

ಇದಕ್ಕೆ ಪರಿಣಾಮಕಾರಿ ಔಷಧವನ್ನು ಉಚಿತವಾಗಿ ಪಡೆಯಿರಿ

ಅತಿ ಭೇದಿಯಾದಾಗ ದೇಹದಲ್ಲಿ ನೀರಿನ ಅಂಶ ಕಡಿಮೆಯಾಗುತ್ತದೆ. ಇದರಿಂದ ಸಹಸ್ರಾರು ಮಕ್ಕಳು ಸಾಯುತ್ತಾರೆ. ಇದಕ್ಕೆ ಪರಿಣಾಮಕಾರಿಯಾದ ಔಷಧವನ್ನು ಆರೋಗ್ಯ ಇಲಾಖೆ ಉಚಿತವಾಗಿ ಒದಗಿಸುತ್ತದೆ.

0 ಎಲ್ಲಾ ಸರಕಾರಿ ಆಸ್ಪತ್ರೆಗಳು
0 ಪ್ರಾಥಮಿಕ ಆರೋಗ್ಯ ಕೇಂದ್ರಗಳು
0 ಪ್ರಾಥಮಿಕ ಆರೋಗ್ಯ ಘಟಕಗಳು
0 ಆರೋಗ್ಯ ಕಾರ್ಯಕರ್ತರು ಮತ್ತು
0 ಸಮುದಾಯ ಆರೋಗ್ಯ ಮಾರ್ಗದರ್ಶಕರುಗಳಿಂದ ಈ ಔಷಧಿಯನ್ನು ಉಚಿತವಾಗಿ ಪಡೆಯಬಹುದು.

ಈ ಪರಿಣಾಮಕಾರಿ ಔಷಧವನ್ನು ಮೇಲೆ ತಿಳಿಸಿದ ಕೇಂದ್ರಗಳಿಂದ ಪಡೆಯಿರಿ, ಅಥವಾ ನೀವೇ ನಿಮ್ಮ ಮನೆಯಲ್ಲಿ ತಯಾರಿಸಿರಿ. ಇದಕ್ಕೆ ಬೇಕಾದ ಪದಾರ್ಥಗಳೆಂದರೆ 3/4 ಚಮಚ ಅಡಿಗೆ ಉಪ್ಪು (3.5 ಗ್ರಾಂ ಅಥವಾ 1 ಚಿಟಿಕೆ). 1/2 ಚಮಚ ಅಡಿಗೆ ಸೋಡಾ (2.5 ಗ್ರಾಂ ಅಥವಾ 1/2 ಚಿಟಿಕೆ). 1/4 ಚಮಚ ಪೊಟ್ಯಾಶಿಯಂ ಕ್ಲೋರೈಡ್ (1.5 ಗ್ರಾಂ ಅಥವಾ 1/4 ಚಿಟಿಕೆ) ಮತ್ತು 3–4 ಚಮಚ (20 ಗ್ರಾಂ) ಸಕ್ಕರೆ ಅಥವಾ ಬೆಲ್ಲ; ಇವೆಲ್ಲವನ್ನೂ ಸರಿಯಾದ ಪ್ರಮಾಣದಲ್ಲಿ ಒಂದು ಲೀಟರ್ ಕುದಿಸಿ. ಆರಿಸಿದ ನೀರಿನಲ್ಲಿ ಬೆರೆಸಿ ಮಗುವಿಗೆ ಭೇದಿ ನಿಲ್ಲುವವರೆಗೂ ಕುಡಿಸಿರಿ. ಒಂದು ವೇಳೆ ಪೊಟ್ಯಾಶಿಯಂ ಕ್ಲೋರೈಡ್ ಸಿಗದಿದ್ದಲ್ಲಿ ಮಿಕ್ಕುಳಿದ ಪದಾರ್ಥಗಳಿಂದ ದ್ರಾವಣವನ್ನು ಮಾಡಬಹುದು.

ಮಕ್ಕಳಿಗೆ ಬಹು ಪ್ರಯೋಜನವಾದ ಈ ಔಷಧಿಯನ್ನು ಎಲ್ಲಾ ವಯಸ್ಸಿನವರೂ ಉಪಯೋಗಿಸಬಹುದು. ಭೇದಿಯಿಂದ ನೀರಿನ ಅಂಶ ಕಡಿಮೆಯಾದಲ್ಲಿ ಈ ಔಷಧಿಯನ್ನು ಕುಡಿಸಲು ಮರೆಯಬೇಡಿರಿ. ಅಂತಹ ಸಂದರ್ಭಗಳಲ್ಲಿ ಸಾಧ್ಯವಾದಷ್ಟು ಎಳನೀರನ್ನು ಕೊಡಬಹುದು.

ಯೂನಿಸೆಫ್ ನಿಯಮಗಳಿಗನುಸಾರವಾಗಿ ತಯಾರಿಸಿದ ಔಷಧಿಯು ಬೇಕಾದ ಅದು ಎಲ್ಲಾ ಔಷಧಾಲಯಗಳಲ್ಲಿ ಸಿಗುತ್ತದೆ. ಇದು ಒಂದು ರೂಪಾಯಿಗಿಂತ ಕಡಿಮೆ ಬೆಲೆಯಲ್ಲಿ ದೊರಕುತ್ತದೆ.

**ಈ ಗುಟ್ಟನ್ನು ನಿಮ್ಮ ನೆರೆಯವರಿಗೂ ತಿಳಿಸಿರಿ**

(ಸಂಖ್ಯೆ ವಾಪ್ರುಇ : ವಾಪ್ರವಿ: ಸಿಆರ್ಎಂ : ಸಿ3 : 85-86 (283/ದಿನಾಂಕ3-10-85)

"ಕರ್ನಾಟಕ ವಾರ್ತೆ"

SAMANYA GNANA, Kannada Monthly, NOVEMBER 1985 Price Rs. 1-00 Regd No. BGW — 75

ತೆರೆದ–ಅಂಚೆ

—ಗೆ

ಶ್ರೀಮತಿ/ಶ್ರೀ ..........................................................................

..........................................................................

..........................................................................

ಎಲ್ಲಾ ವಿದ್ಯಾರ್ಥಿಗಳಿಗೂ ಉಪಾಧ್ಯಾಯರಿಗೂ ಮತ್ತು ಕೆ. ಪಿ. ಎಸ್, ಸಿ. ಮುಂತಾದ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಉಪಯುಕ್ತವಾದ "ಸಾಮಾನ್ಯ ಜ್ಞಾನ" ಕನ್ನಡ ಶೈಕ್ಷಣಿಕ ಮಾಸ ಪತ್ರಿಕೆಗೆ ಇಂದೇ ಚಂದಾರರಾಗಿರಿ.

ಆಜೀವ ಸದಸ್ಯತ್ವ : ರೂ. 101/– ವಾರ್ಷಿಕ ಚಂದಾ : 10 ರೂಪಾಯಿಗಳು (ಅಂಚೆ ವೆಚ್ಚ ಸೇರಿ)

ಹಣವನ್ನು ಮನಿಯಾರ್ಡರ್ ಮೂಲಕ ಕಳಿಸಿಕೊಡಿ. ಎಂ. ಓ. ಕೂಪನ್‌ನಲ್ಲಿ ತಮ್ಮ ವಿಳಾಸವನ್ನು ತಪ್ಪದೇ ಬರೆಯಿರಿ.

ಇಂದೇ ಬರೆಯಿರಿ : **'ಸಾಮಾನ್ಯ ಜ್ಞಾನ' 216, ಸುಬ್ರಮಣ್ಯನಗರ ಬೆಂಗಳೂರು–560 021.**